

ಕನಸು ಕಂಡೆನೆ ಮನದಲ್ಲಿ ಕಳವಳಗೊಂಡೆನೆ ॥ ಪ ॥

ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ ॥ ಅ.ಪ ॥

ಪೊನ್ನ ಕಡಗವನಿಟ್ಟು ತಿಮ್ಮಯ್ಯ ತಾ ಪೋಲ್ವನಾಮವನಿಟ್ಟು
ಅಂದುಗೆ ಘಲುಕೆನ್ನುತ ಎನ್ನ ಮುಂದೆ ಬಂದು ನಿಂತಿದ್ದನಲ್ಲೆ ॥ 1 ॥

ಮಕರ ಕುಂಡಲವನಿಟ್ಟು ತಿಮ್ಮಯ್ಯ ತಾ ಕಸ್ತೂರಿ ತಿಲಕವನ್ನಿಟ್ಟು
ಗೆಜ್ಜೆ ಘಲುಕೆನ್ನುತ ಸ್ವಾಮಿ ತಾ ಬಂದು ನಿಂತಿದ್ದನಲ್ಲೆ ॥ 2 ॥

ಮುತ್ತಿನ ಪಲ್ಲಕ್ಕಿ ಯತಿಗಳು ಹೊತ್ತು ನಿಂತಿದ್ದರಲ್ಲೇ
ಛತ್ರ ಚಾಮರದಿಂದ ರಂಗಯ್ಯನ ಉತ್ಸವ ಮೂರುತಿಯು ॥ 3 ॥

ತಾನಮರ ಕಮಲದಲಿ ಕೃಷ್ಣಯ್ಯ ತಾ ಬಂದು ನಿಂತಿದ್ದನಲ್ಲೆ
ವಾಯುಬೊಮ್ಮಾದಿಗಳು ರಂಗಯ್ಯನ ಸೇವೆಯ ಮಾಡುವರೆ ॥ 4 ॥

ನವರತ್ನ ಕೆತ್ತಿಸಿದ ಸ್ವಾಮಿ ಎನ್ನ ಹೃದಯಮಂಟಪದಲ್ಲಿ
ಸರ್ವಾಭರಣದಿಂದ ಪುರಂದರ ವಿಠಲನ ಕೂಡಿದೆನೆ ॥ 5 ॥

—ಶ್ರೀ ಪುರಂದರದಾಸರು.




ಗೌರವ ಸಂಪಾದಕರು

ಎಸ್ ಲಕ್ಷ್ಮೀನಾರಾಯಣ ಐ.ಎ.ಎಸ್.

ಸಂಪಾದಕ.

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ·

ಡಾ ಎಸ್ ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ


---

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

---

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

---




ಸಂಪುಟ ೧೯]  ಜನವರಿ ೧೯೮೭  [ಸಂಚಿಕೆ ೮


# ವಿಷಯಸೂಚಿ



---

ಮುಖಚಿತ್ರ : ಸೂರ್ಯನಾರಾಯಣ —ಚಿತ್ರ ಶ್ರೀಶಶಿ

ಹಿಂಬದಿಯಲ್ಲಿ : ಸಂಕ್ರಾಂತಿ ಸಂಭ್ರಮ —ಚಿತ್ರ ಶ್ರೀ ಕೆ. ಜಗದೀಶ್.

ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಹಾಗೂ ಶ್ರೀನಿವಾಸ ಮಂಗಾಪುರದ ಬ್ರಹ್ಮೋತ್ಸವ ಚಿತ್ರಗಳು.

# ಸಂಪಾದಕೀಯ

ಮನುಷ್ಯ ಹಾಗೂ ದೇವತೆಗಳ ನಡುವೆ ಅಗ್ನಿಯನ್ನು ರಾಯಬಾರಿಯನ್ನಾಗಿ, ವಾರ್ತಾವಾಹಕನಾಗಿ ಚಿತ್ರೀಕರಿಸಿದ್ದುಂಟು. ಅಗ್ನಿ ಉಪಾಸನೆಗೆ ಮೂಲವಾವರೂ ಇಂತಹುದೇ ಭಾವ ಸಮುಚ್ಚಯದ ಆಧಾರ. ಸೂರ್ಯೋಪಾಸನೆಯಾದರೋ ಅಗ್ನಿ ಉಪಾಸನೆಯೊಂದಿಗೇ ಎಲ್ಲ ಜನಾಂಗಗಳಲ್ಲೂ ವ್ಯಾಪಕವಾಗಿ ಕಂಡು ಬರುವ ಅಂಶವಾಗಿದ್ದು ಸೂರ್ಯ ಒಂದು ಅರ್ಥದಲ್ಲಿ ಅಗ್ನಿಯ ಇನ್ನೊಂದು ರೂಪವೂ ಆಗಿದ್ದಾನೆ. ಸೂರ್ಯ ಎಂದರೇನೆ ಬೆಳಕು, ತೇಜಸ್ಸು, ಶಾಖವೆಂಬ ಅರ್ಥಗಳೂ ಇವೆ.

ಸನಾತನ ಧರ್ಮದಲ್ಲಿ ಸೂರ್ಯನನ್ನು ನಾರಾಯಣ ಎಂದು ಕರೆದು ಅವನ ಸಂರಕ್ಷಕ ಗುಣಕ್ಕೆ ಒತ್ತು ಕೊಟ್ಟು ಆರಾಧಿಸಿದರು. ಸೌರ ಕುಟುಂಬದಲ್ಲಿ ಹಿರಿಯನಾಗಿ ತನ್ನ ಸುತ್ತಣ ಗ್ರಹಗಳನ್ನು ಪರಿಭ್ರಮಣಕ್ಕೆ ಒಳಗಾಗಿಸಿ ತನ್ನ ಅಂಕೆಯಲ್ಲಿಟ್ಟುಕೊಂಡು, ತಾನೂ ಅವುಗಳಂತೆಯೇ ಪಥಕ್ರಮಣ ಮಾಡುತ್ತ ರಾಶಿ ಚಕ್ರದ ಮನೆಗಳನ್ನು ಹೊಗುವ ಕ್ರಮದಲ್ಲಿ–ಕಾಲದಲ್ಲಿ–ಸಂಕ್ರಮಣಗಳನ್ನುಂಟಾಗಿಸುತ್ತ ನಡೆದು, ಭೂಮಿಯ ಮೇಲಣ ವಾತಾವರಣವನ್ನು ಜೀವಪರಿಪೋಷಕವಾಗುವಂತೆ ಪರಿವರ್ತನೆಗೆ ಉಂಟಾಗಿಸುವ ಅವನ ಉಪಾಸನೆಯಲ್ಲಿ ಸನಾತನ ಧರ್ಮ ಹಲವಾರು ವಿಶಿಷ್ಟ ವಿಧಿ ವಿಧಾನಗಳನ್ನೂ ಏರ್ಪಡಿಸಿಕೊಂಡು ನಡೆಯಿತು

ಹಿಂದೂ ಧರ್ಮದಲ್ಲಿ ಸೂರ್ಯ ಸಕಲಜೀವಸಂಜೀವಿ. (ವೈಜ್ಞಾನಿಕವಾಗಿಯೂ ಇದು ಸತ್ಯ) ಬೇರೆ ಬೇರೆ ಸೌರ ಕುಟುಂಬಗಳು ಹಲವಾರು ಇವೆಯೆಂಬುದೂ, ಈ ಸೌರ ಕುಟುಂಬದಾಚೆ ಹೊರಗಡೆಯಲ್ಲಿ ನಮ್ಮಂತೆಯೇ ಬುದ್ಧಿಯನ್ನು ಬೆಳವಣಿಗೆಯ ಸಾಧನವಾಗಿ ಬಳಸಬಲ್ಲ ಜೀವಗಳು ಇರಬಹುದೆಂದೂ, ಅವುಗಳ ಅನ್ವೇಷಣೆ ನಡೆಯುತ್ತಿದೆಯೆಂದೂ ನಾವು ದಿನನಿತ್ಯ ಓದುತ್ತ ಇರುವ ಸುದ್ದಿಗಳೇ ಆದರೂ, ಇವುಗಳಿಂದ ಧರ್ಮದ ಪರಿಕಲ್ಪನೆಗೆ ಯಾವುದೇ ಕೊರತೆಯೂ ಉಂಟಾಗದು ಎಂಬುದು ಗಮನಾರ್ಹ. ದ್ವಾದಶಾದಿತ್ಯರೆಂದೂ ಯಕ್ಷ, ಕಿನ್ನರ, ಕಿಂಪುರುಷ, ಇತ್ಯಾದಿ ಲೋಕ, ಜನವೆಂಬುದೂ ಹೈಂದವ ಧರ್ಮದಲ್ಲಿ ತಿಳಿದ ಅಂಶಗಳೇ. ಇಲ್ಲೆಲ್ಲ ಒಂದು ಮುಖ್ಯ ಅಂಶವೆಂದರೆ ಭಾರತೀಯ ಅನ್ವೇಷಣೆಯ ಅಂತರಾರ್ಥದ, ಪ್ರತಿಮಾತ್ಮಕತೆಯ ಹತ್ತಿರದಲ್ಲೇ ಆಧುನಿಕ ವೈಜ್ಞಾನಿಕ ಅನ್ವೇಷಣೆ ಸಾಗುತ್ತಿದೆಯೆಂಬ ಸತ್ಯ.

ಇಂತಲ್ಲಿ ಮಕರ ಸಂಕ್ರಾಂತಿ ಬಂದಿದೆ. ಪರಂಪರೆಯ ಜ್ಞಾನದೊಡನೆ ಹೊಸ ವಿಜ್ಞಾನವನ್ನೂ ಸೇರಿಸಿಕೊಂಡು ಬಾಳನ್ನು ಮತ್ತಷ್ಟು ಹಸನಾಗಿಸಿಕೊಳ್ಳುವ ಬಯಕೆ ಹೊಂದಿ ನಡೆಯಬೇಕಾದ್ದು ಕರ್ತವ್ಯ.

ಸಂಕ್ರಮಣ ಕಾಲದಲ್ಲಿ ಶ್ರದ್ಧೆಯಿಂದ ಹಿರಿಯರನ್ನು ನೆನೆಯುವುದು ಪರಂಪರೆ. ಅಲ್ಲೂ ಪೂರ್ವಜ್ಞಾನಕ್ಕೆ ಒತ್ತು ಇದೆ ಎಂಬುದನ್ನು ಮನವರಿಯಬೇಕು. ಅನುಕ್ಷಣವೂ ಜಾರುತ್ತಿರುವ ವರ್ತಮಾನದಲ್ಲಿ ಭವಿಷ್ಯ ನಿಲ್ಲುವುದು ಎಂದರ ಭೂತಕಾಲದ ತಳಹದಿಯಲ್ಲಿಯೇ ಎಂಬುದನ್ನು ಈ ಸಂಕ್ರಮಣಕಾಲ ವಿವರಿಸುತ್ತದೆ. ಹೀಗೆ ಭವಿಷ್ಯನ್ಮಾರ್ಗವನ್ನು ಭವ್ಯಗೊಳಿಸಿಕೊಳ್ಳಲು ಭೂತಜ್ಞಾನವನ್ನು ಬಳಸಿಕೊಂಡು ಮುಂದುವರಿಯುವುದರಲ್ಲಿಯೇ ಸಂಸ್ಕೃತಿ ನಾಗಕತೆಗಳ ಹಿರಿಮೆಯಡಗಿದೆ.

ಮಕರ ಸಂಕ್ರಾಂತಿಯ ಶುಭಸಮಯದಲ್ಲಿ ಸೂರ್ಯನನ್ನೂ ಸೂರ್ಯನಾರಾಯಣನನ್ನೂ ಆರಾಧಿಸಿ, ಕ್ಷೇಮವನ್ನು ಪಡೆಯುವ.



ಶೃಂಗೇರಿ ಸ್ವಾಮಿಗಳನ್ನು ಆಹ್ವಾನಿಸುತ್ತ ತಿ ತಿ ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ ಚಕ್ರಧರರಾವ್

## ತಿರುಮಲೆಯ ಶೃಂಗೇರಿ ಮಠದ ಜೀರ್ಣೋದ್ಧಾರ

ತಿರುಮಲೆಯ ಪಶ್ಚಿಮ ರಥಬೀದಿಯ ಪ್ರಾಚೀನವಾದ ಶೃಂಗೇರಿ ಮಠದ ಜೀರ್ಣೋದ್ಧಾರದ ನಂತರ ಅದನ್ನು ಶೃಂಗೇರಿಯ ಪೀಠಾಧಿಪತಿ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥಸ್ವಾಮಿ, ಶ್ರೀ ಶ್ರೀ ಭಾರತೀ ತೀರ್ಥಸ್ವಾಮಿಗಳು ಈಚೆಗೆ ಉದ್ಘಾಟಿಸಿದರು. ಪ್ರಾರಂಭೋತ್ಸವದಲ್ಲಿ ವಿಶೇಷ ಆಹ್ವಾನಿತರಾಗಿ ಆಗಮಿಸಿ ಮಾತನಾಡಿದ ಆಂಧ್ರ ಪ್ರದೇಶದ ದೇವಾದಾಯ ಶಾಖಾ ಕಮಿಷನರ್ ಶ್ರೀ ಎಂ ಕೆ. ಆರ್. ವಿನಾಯಕರು ದೇಶದ ಹಿರಿಯ ಪೀಠಗಳಲ್ಲಿ ಶೃಂಗೇರಿಯ ಶಾರದಾ ಪೀಠವೂ ಒಂದು ಎಂದು ಹೇಳುತ್ತ ಹಲವು ಹಿರಿಯ ಪೀಠಾಧಿಪತಿಗಳು ದೇವಾಲಯ ನಿರ್ವಹಣೆಯಲ್ಲಿ ಸರ್ಕಾರಕ್ಕೆ ನೀಡಿದ ಸಲಹೆಗಳು ಪರಿಶೀಲನೆಯಲ್ಲಿವೆಯೆಂದೂ, ಇವೆಲ್ಲವನ್ನೂ ಆಚರಣೆಗೆ ತರಲು ಯತ್ನಿಸುವುದಾಗಿಯೂ ನುಡಿದರು. ಸಭೆಯಲ್ಲಿ ಮಾತನಾಡುತ್ತ ತಿ. ತಿ ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೈ. ಚಕ್ರಧರರಾವ್ ಅವರು ತಿರುಮಲೆಯಲ್ಲಿನ ಪವಿತ್ರವಾದ ಶೃಂಗೇರಿ ಮಠದ ಎಲ್ಲ ಕಾರ್ಯಗಳಲ್ಲೂ ದೇವಸ್ಥಾನಗಳ ನೆರವು ಸದಾ ಸಿದ್ಧವೆಂದೂ ತಿಳಿಸಿದರು.

ಸನಾತನ ಧರ್ಮ, ಸಂಪ್ರದಾಯ, ಸಂಸ್ಕೃತಿ, ದ್ವೈತಚಿಂತನೆ, ಆಧ್ಯಾತ್ಮಿಕ ಆಲೋಚನೆಗಳ ಬಗ್ಗೆ ಶ್ರೀ ಶ್ರೀ ಭಾರತೀ ತೀರ್ಥರು ಉಪನ್ಯಾಸ ನೀಡಿದರು. 130 ವರ್ಷಗಳ ಹಿಂದೆ ಶ್ರೀ ಶ್ರೀ ವಿಷ್ಣು ಭಾರತೀ ತೀರ್ಥ ಶ್ರೀಪಾದಂಗಳು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿದ ನಂತರ ಶ್ರೀನಿವಾಸನಿಗೂ ಈ ಮಠಕ್ಕೂ ಸಂಬಂಧ ಬಾಂಧವ್ಯಗಳುಂಟಾದವೆಂದೂ ಅವರು ತಿಳಿಸಿದರು.

ಉತ್ತರ ತೇರುಬೀದಿಯ ಶೃಂಗೇರಿ ಶಂಕರ ಮಠವನ್ನು ಮೂವತ್ತು ವರ್ಷಗಳ ಹಿಂದೆ ಶ್ರೀ ಕಾಸು ಬ್ರಹ್ಮಾನಂದರೆಡ್ಡಿಯವರು ಆರಂಭಿಸಿದರು. ಪಶ್ಚಿಮ ತೇರುಬೀದಿಯ ಪುರಾತನ ಮಠದ ಪುನರುದ್ಧರಣ ಕಾರ್ಯದಲ್ಲಿ ಶ್ರೀ ಜಲಗಂ ವೆಂಗಲ ರಾವು, ಅಂದಿನ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಎಂ ಚಂದ್ರಮೌಳಿರೆಡ್ಡಿ, ಶ್ರೀ ಪಿ ವಿ. ಆರ್. ಕೆ. ಪ್ರಸಾದ್ ಅವರುಗಳು ಬಹಳ ನೆರವು ನೀಡಿದರು ಎಂದು ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಸ್ವಾಮಿಗಳು ಜೀರ್ಣೋದ್ಧಾರದ ಇತಿಹಾಸವನ್ನು ಗುರುತಿಸಿದರು.

ಸ್ವಾಮಿಗಳು ಶ್ರೀ ಎಂ. ಕೆ ಆರ್. ವಿನಾಯಕ್ ಹಾಗೂ ಶ್ರೀ ವೈ ಚಕ್ರಧರರಾವ್ ಅವರನ್ನು ಸನ್ಮಾನಿಸಿದರು

## ತಿರುಮಲೇಶನ ಆರಾಧನೆಯಲ್ಲಿ ನೇಪಾಳದ ರಾಜದಂಪತಿಗಳು

ಜಗತ್ತಿನಲ್ಲೇ ಘೋಷಿತ ಹಿಂದೂ ರಾಷ್ಟ್ರವಾದ ನೇಪಾಳದ ಮಹಾರಾಜ ಶ್ರೀ ಬೀರೇಂದ್ರ ವೀರ ವಿಕ್ರಮ ಸೋಮದೇವ ಹಾಗೂ ಮಹಾರಾಣಿ ಶ್ರೀಮತಿ ಐಶ್ವರ್ಯ ರಾಜ್ಯಲಕ್ಷ್ಮೀದೇವಿ ಅವರುಗಳು ಕಳೆದ ನವಂಬರ್ 18 ರಂದು ಬೆಂಗಳೂರಿನಿಂದ ತಿರುಪತಿಗೆ ವಿಮಾನದಲ್ಲಿ ಆಗಮಿಸಿ; ಕಾರಿನಲ್ಲಿ ತಿರುಮಲೆಗೆ ತೆರಳಿ ಶ್ರೀನಿವಾಸನನ್ನು ಆರಾಧಿಸಿದರು.

(37ನೇ ಪುಟ ನೋಡಿ)



ನೇಪಾಳದ ರಾಜ ರಾಣಿಯರೊಡನೆ ತಿ ತಿ ದೇ. ಅಧ್ಯಕ್ಷ ಶ್ರೀ ಡಿ ಸೀತಾರಾಮಯ್ಯ ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ.

# ಸಾಂಭ್ರಮದ ಸಂಕ್ರಾಂತಿ

ಪ್ರತ್ಯಕ್ಷದೇವನಾದ ಭಗವಾನ್ ಸೂರ್ಯ ವೇದಗಳ ಕಾಲದಿಂದಲೂ ಹಿಂದೂಗಳಿಗೆ ಪರಮ ಪೂಜನೀಯನಾಗಿದ್ದಾನೆ. ಪ್ರತಿನಿತ್ಯವೂ ಅವನು ಆರಾಧಿಸಲ್ಪಡುತ್ತಿದ್ದರೂ ಸಂಕ್ರಮಣ, ಗ್ರಹಣ, ರಥಸಪ್ತಮಿ ಮುಂತಾದ ದಿನಗಳಲ್ಲಿ ಸೂರ್ಯನಿಗೆ ವಿಶೇಷ ಪೂಜೆ ಸಲ್ಲುತ್ತದೆ. ಗಗನ ಪಥದಲ್ಲಿ ಅವನ ಸಂಚಾರ ರಾಶಿಚಕ್ರದಿಂದ ಗುರುತಿಸಲ್ಪಟ್ಟಿದೆ. ಈ ರಾಶಿ ಚಕ್ರದ ಪರಿಭ್ರಮಣದಲ್ಲಿ ಸೂರ್ಯನು ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಯನ್ನ ಪ್ರವೇಶಿಸುವ ಕಾಲವನ್ನು ಸಂಕ್ರಮಣ ಎಂದು ಕರೆಯುತ್ತಾರೆ. ಮೇಷಾದಿ ಹನ್ನೆರಡು ಸಂಕ್ರಮಣಗಳು ಒಂದು ವರ್ಷದ ಅವಧಿಯಲ್ಲಿ ಬಂದರೂ, ಇವುಗಳಲ್ಲಿ ಅತ್ಯಂತ ಮಹತ್ತ್ವಪೂರ್ಣವೂ, ಪವಿತ್ರತಮವೂ ಆದವು ಮೇಷ ಸಂಕ್ರಮಣ ಮತ್ತು ಮಕರ ಸಂಕ್ರಮಣಗಳು. ಮೇಷಸಂಕ್ರಮಣ, ಸೂರ್ಯನು ಮೀನರಾಶಿಯನ್ನು ಬಿಟ್ಟು ಮೇಷರಾಶಿಯನ್ನು ಪ್ರವೇಶಿಸುವ ಕಾಲ ಇದು ಸೌರಮಾನದ ಎಣಿಕೆಯಲ್ಲಿ ಹೊಸ ವರುಷದ ಆದಿ, ಯುಗಾದಿ, ಅಂತೆಯೇ ಮಹತ್ತ್ವಪೂರ್ಣವಾದುದು

ಸೂರ್ಯನು ಧನುರ್ ರಾಶಿಯನ್ನು ಬಿಟ್ಟು ಮಕರ ರಾಶಿಯನ್ನು ಪ್ರವೇಶಿಸುವ ದಿನವೇ ಮಕರ ಸಂಕ್ರಮಣ ದಕ್ಷಿಣದ ತುತ್ತತುದಿಯನ್ನು ತಲುಪಿದ್ದ ಸೂರ್ಯ ಅಂದು ಉತ್ತರದೆಡೆಗೆ ತಿರುಗುತ್ತಾನೆ. ನವಚೈತನ್ಯವನ್ನು ನೀಡತೊಡಗುತ್ತಾನೆ. ಮಕರ ಸಂಕ್ರಮಣ ಭಾರತದಾದ್ಯಂತ ವಿಶೇಷ ಸಂಭ್ರಮದಿಂದ ಆಚರಿಸಲ್ಪಡುತ್ತದೆ. ಈ ದಿನ ಸ್ನಾನ ಪೂಜಾದಿಗಳಿಗೆ, ಜಪತಪಾದಿಗಳಿಗೆ, ದಾನಧರ್ಮಗಳಿಗೆ ಪರಮಶ್ರೇಷ್ಠವೆನಿಸಿದೆ. ಅಂದು ಪುಣ್ಯ ನದೀ ತೀರ್ಥಗಳಲ್ಲಿ ಸ್ನಾನಮಾಡುವುದು, ಶ್ರಾದ್ಧಾದಿಗಳನ್ನು ನೆರವೇರಿಸಿ ತರ್ಪಣಾದಿಗಳನ್ನು ನೀಡುವುದು, ಹಿಂದೂಗಳ ಪದ್ಧತಿ. ತಮಗೆ ಹತ್ತಿರವಿರುವ ಯಾವ ನದೀ ತೀರ್ಥದಲ್ಲಾದರೂ ಸ್ನಾನ ಮಾಡಬಹುದಾದರೂ, ಮಕರ ಸಂಕ್ರಮಣದಂದು, ಗಂಗಾನದಿ ಸಾಗರದೊಡನೆ ಸಂಗಮಗೊಳ್ಳುವ ಗಂಗಾಸಾಗರವೆಂದು ಹೆಸರಾದ ಸ್ಥಳವೂ, ಗಂಗಾ, ಯಾಮುನಾ, ಸರಸ್ವತೀ ಸಂಗಮ ಕ್ಷೇತ್ರವಾದ ಪ್ರಯಾಗವೂ, ಅತ್ಯಂತ ಶ್ರೇಷ್ಠವೆನಿಸಿವೆ. ಸೂರ್ಯೋದಯಕ್ಕೆ ಮುನ್ನವೇ ಮತ್ತು ಸಂಕ್ರಮಣ ಹುಟ್ಟುವ ಕಾಲದಲ್ಲಿ ಸಹಸ್ರಾರು ಜನರು ಅಲ್ಲಿ ಸೇರುತ್ತಾರೆ. ಅಲ್ಲಿ ಪ್ರಯಾಗದಲ್ಲಿ ಅಂದಿನಿಂದ ಮಾಘಮೇಳ ಪ್ರಾರಂಭ. ಹನ್ನೆರಡು ವರ್ಷಗಳಿಗೊಮ್ಮೆ ಪ್ರಯಾಗದಲ್ಲಿ ಮಕರ ಸಂಕ್ರಮಣದಂದು ಕುಂಭಮೇಳ ಮಹಾವೈಭವ, ಮಹಾಸಂಭ್ರಮಗಳಿಂದ ನಡೆಯುತ್ತದೆ.

ದಾನ ಧರ್ಮಾದಿಗಳಿಗೂ ಈ ದಿನ ಅತ್ಯಂತ ಶ್ರೇಷ್ಠವೆನಿಸಿದೆ. ಈ ದಿನ ನೀಡಿದ ದಾನಗಳಿಂದ ಅನೇಕ ಪಟ್ಟು ಹೆಚ್ಚು ಫಲಗಳನ್ನು ಅನೇಕ ಜನ್ಮಗಳಲ್ಲಿ ಪಡೆಯುತ್ತಾರೆಂದು ಹೇಳಲಾಗಿದೆ. ನೂತನ ವಸ್ತ್ರಗಳು, ಅಕ್ಕಿ, ಬೆಲ್ಲ, ಎಳ್ಳು, ತೆಂಗಿನಕಾಯಿ, ಕುಂಬಳಕಾಯಿ, ಹಣ್ಣು ಹಂಪಲು, ಮುಂತಾದ ಆಹಾರ ಪದಾರ್ಥಗಳು, ಪಾತ್ರೆಗಳು, ದ್ರವ್ಯ, ಏನನ್ನು ಬೇಕಾದರೂ ಅಂದು ಸತ್ಪಾತ್ರರಿಗೆ ದಾನ ಮಾಡಬಹುದು. ಸುಮಂಗಲಿಯರಿಗೆ ಅರಿಸಿನ, ಕುಂಕುಮ, ಬಳೆ, ವೀಳ್ಯದ ಬಾಗಿನ ಮುಂತಾದ ಮಂಗಳ ದ್ರವ್ಯಗಳನ್ನು ಮುತ್ತೈದೆಯರು ಕೊಡಬಹುದು. ವಿಶೇಷ ಪೂಜೆಗಳ ನಂತರ ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ ಮನೆಯವರೆಲ್ಲರೂ ಆನಂದ ದಿಂದ ಸೇವಿಸುತ್ತಾರೆ. ಬಂಧುಮಿತ್ರರಿಗೂ ಹಂಚುತ್ತಾರೆ. ಈ ಪದ್ಧತಿ ಆದಿಕಾಲದಿಂದಲೂ ನಡೆದು ಬಂದಿದೆ

ಸಂಕ್ರಮಣದ 30 ಗಳಿಗೆ ಹಿಂದಿನ ಮತ್ತು 30 ಗಳಿಗೆ ಮುಂದಿನ ಕಾಲ ಪವಿತ್ರವೆನಿಸಿದೆ. ಕಾಲಕ್ರಮೇಣ ಸಂಕ್ರಮಣ ಅಥವಾ ಸಂಕ್ರಾಂತಿಗೆ ಒಂದು ಮೂರ್ತರೂಪ ಒಂದು ಆರಾಧನೆ ಪ್ರಾರಂಭವಾಯಿತು. ದೇವೀಪುರಾಣ ಸಂಕ್ರಾಂತಿಯನ್ನು ದೇವೀಸ್ವರೂಪವೆಂದೇ ವರ್ಣಿಸಿದೆ. ಅಂದು ಸಂಕ್ರಾಂತಿ ದೇವತೆ, ಶಂಕರಾಸುರನೆಂಬ ರಾಕ್ಷಸನನ್ನು ಕೊಂದಳೆಂದು ಹೇಳುವರು. ಪಂಚಾಂಗಗಳಲ್ಲಿ ಸಂಕ್ರಾಂತಿ ಮೂರ್ತಿಯನ್ನು ಮೂರು ತಲೆ, ಎರಡು ಮುಖ, ಐದು ಬಾಯಿ, ಮೂರು ಕಣ್ಣು, ಜೋಲಾಡುವ ಕಿವಿ, ಮತ್ತು ಹುಬ್ಬು ಕೆಂಪು ಹಲ್ಲು, ಉದ್ದವಾದ ಮೂಗು, ಎಂಟು ತೋಳು, ಎರಡು ಕಾಲು, ಕಪ್ಪು ಬಣ್ಣದ ಅರ್ಧ ಗಂಡು, ಅರ್ಧ ಹೆಣ್ಣಿನ ಆಕಾರದ ಸ್ವರೂಪವೆಂದು ವರ್ಣಿಸಲಾಗಿದೆ.

ಭಾರತದ ಎಲ್ಲ ಕಡೆಗಳಲ್ಲೂ ಸಂಕ್ರಾಂತಿ ಬಹು ಸಂಭ್ರಮದಿಂದ ಆಚರಿಸಲ್ಪಟ್ಟರೂ, ಕರ್ನಾಟಕ, ತಮಿಳು ನಾಡು ಮತ್ತು ಆಂಧ್ರಪ್ರದೇಶಗಳಲ್ಲಿ ಈ ಹಬ್ಬಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ. ಇಲ್ಲಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರಭಾವಗಳು ಮಿಳಿತಗೊಂಡು, ವಿನೂತನ ಶೋಭೆಯನ್ನೂ, ಸಾರ್ವಕಾಲಿಕ ಮೌಲ್ಯವನ್ನು ಪಡೆದಿದೆ.

ಶ್ರೀಮತಿ ಸುಮನಾಬದರೀನಾಥ್

ಭಗವಾನ್ ಸೂರ್ಯನ, ಪ್ರಕೃತಿಯ ಅಸೀಮ ಶಕ್ತಿಗಳ ಮಹಾಪೂಜೆಯೇ ಸಂಕ್ರಾಂತಿ ಅಥವಾ ಪೊಂಗಲ್ ಎನ್ನಬಹುದು. ಅದೇ ತಾನೇ ಸುಗ್ಗಿಯಾಗಿ ಹೊಸದಾದ ಭತ್ತ, ಕಬ್ಬುಗಳಿಂದ ರೈತನ ಕಣಜ ತುಂಬಿ ತುಳುಕುತ್ತಿರುತ್ತದೆ. ಪ್ರಕೃತಿ ದೇವಿಯಿತ್ತ ಕೊಡುಗೆಯಿಂದ ತೃಪ್ತನಾಗಿ, ಕೃತಜ್ಞ ಭಾವ ತುಂಬಿದ ಹೃದಯದಿಂದ ರೈತನು ಅದಕ್ಕೆ ಕಾರಣರಾದ ಸೂರ್ಯ, ಪ್ರಕೃತಿ ಮತ್ತು ದನ ಕರುಗಳಿಗೆ ಪೂಜೆ ಸಲ್ಲಿಸುತ್ತಾನೆ. ಹೊಸದಾಗಿ ಕಣಜತುಂಬಿದ ಅಕ್ಕಿ ಬೆಲ್ಲ, ಸಕ್ಕರೆ, ಹಾಲು ತುಪ್ಪಗಳಿಂದ ಪೊಂಗಲ್ ತಯಾರಿಸಿ ಸೂರ್ಯನಿಗೆ ನೈವೇದ್ಯ ಮಾಡುತ್ತಾನೆ. ತಾನೂ ಭುಜಿಸಿ, ಮಿತ್ರರಿಗೂ ನೀಡುತ್ತಾನೆ. ಪ್ರಕೃತಿ ಪ್ರೀತಳಾಗಲೆಂದು ದಾನ ಧರ್ಮಾದಿಗಳನ್ನು ಆಚರಿಸುತ್ತಾನೆ. ಇದೇ ಸಂಕ್ರಾಂತಿ ಅಥವಾ ಪೊಂಗಲ್

ಪೊಂಗಲ್ ತಮಿಳು ನಾಡಿನ ನಾಡಹಬ್ಬ. ಅಲ್ಲಿ ಬಹು ಹಿಂದಿನಿಂದಲೂ ಆಚರಣೆಯಲ್ಲಿರುವ ಈ ಹಬ್ಬ, ತಮಿಳುನಾಡಿನ ಎಲ್ಲೆಡೆಗಳಲ್ಲೂ, ವಿಶೇಷವಾಗಿ ಹಳ್ಳಿಯ ಕಡೆಗಳಲ್ಲಿ ಅತ್ಯಂತ ಸಂಭ್ರಮದಿಂದ ಮೂರು ದಿನಗಳ ಕಾಲ ಆಚರಿಸಲ್ಪಡುತ್ತೆ. ಮೊದಲನೆಯ ದಿನ ಭೋಗಿ ಹಬ್ಬ, ಎರಡನೆಯ ದಿನ ಪೊಂಗಲ್, ಮೂರನೆಯ ದಿನ ಮಾಟ್ಟು ಪೊಂಗಲ್

ಹಬ್ಬವಿನ್ನೂ ಸುಮಾರು ಹದಿನೈದು ದಿನಗಳಿವೆ ಎನ್ನುವಾಗಲಿಂದಲೇ ಸಿದ್ಧತೆ ಪ್ರಾರಂಭವಾಗುತ್ತದೆ. ಮನೆಗಳಿಗೆಲ್ಲಾ ಸುಣ್ಣ ಬಣ್ಣ ಹಚ್ಚುತ್ತಾರೆ ರಂಗವಲ್ಲಿಗಳಿಂದ ಸಾರಣೆ ಕಾರಣೆಗಳಿಂದ ಅಲಂಕರಿಸುತ್ತಾರೆ. ಹಳೆಯ ಬಟ್ಟೆಗಳನ್ನು, ಹಳೆಯ ಸಾಮಾನುಗಳನ್ನು ತೆಗೆದು ಹೊಸ ಬಟ್ಟೆಗಳನ್ನು, ಹೊಸ ಪಾತ್ರೆಗಳನ್ನು ತರುತ್ತಾರೆ. ತಾಳೆಯ ಗರಿಗಳಿಂದ, ಬಣ್ಣ ಬಣ್ಣದ ಹೂಗಳಿಂದ ಸುಂದರವಾದ ತೋರಣಗಳನ್ನು, ಮಾಲೆಗಳನ್ನು ರಚಿಸುವುದೊಂದು ತಮಿಳುನಾಡಿನ ವಿಶೇಷ. ಅವು

# ಧನುರ್ಮಾಸ ಮಹತ್ತ್ವ

ಆಯಾಯಾ ಕಾಲ ನಿಯಮಾದಿಗಳನ್ನು ಪರಿಪಾಲಿಸಿಕೊಂಡು ಬರುವುದೇ ಕಾಲಾಂತರ್ಗತ, ಕಾಲನಿಯಾಮಕ, ಕಾಲಾತೀತ, ತ್ರಿಕಾಲಜ್ಞ ನಾದ ಕಾಲಮೂರ್ತಿಯಾದ ಹಾಗೂ ಕಾಲನಿಗೇ ಕಾಲನಾದ, ಪರಮಾತ್ಮ ನಾದ ಶ್ರೀ ನಾರಾಯಣನ ಸೇವೆ ಎಂದರಿಯುವುದೇ ಹರಿಪೂಜೆ

ಧನುರ್ಮಾಸ ಯಾವಾಗ :—

ದೇವತೆಗಳಿಗೆ ಉತ್ತರಾಯಣ ಹಗಲು, ದಕ್ಷಿಣಾಯನ ರಾತ್ರಿ ಅಂದರೆ ಅಂದರೆ ಆಷಾಡ ಶುದ್ಧ ಕರ್ಕ ಸಂಕ್ರಮಣದಿಂದ ಆರಂಭಿಸಿ ಮಕರ ಸಂಕ್ರಾಂತಿಯವರೆಗೂ ಆಗುತ್ತದೆ. ಆದ್ದರಿಂದ ನಿತ ವ್ರತನಿಯಮಾದಿಗಳು ಹಾಗೂ ಉಕ್ತಹಬ್ಬಗಳ ವಿನಹ ಮತ್ಯಾವ ಶುಭಕಾರ್ಯಗಳನ್ನೂ ಮಾಡು ವಂತಿಲ್ಲ. ದೇವತೆಗಳಿಗೆ ರಾತ್ರಿ ಮುಗಿಯುವ ಮುಂಚೆ ಉತ್ಥಾನ ದ್ವಾದಶಿ ದಿನ ದೇವರನ್ನು ಎಬ್ಬಿಸಿ, ಮಾರ್ಗಶಿರದಲ್ಲಿ ಬರುವ ಸಂಕ್ರಮಣದಿಂದ ಆರಂಭವಾಗುವ ಧನುರ್ಮಾಸವು ದೇವತೆಗಳಿಗೆ ಅರುಣೋದಯವಾದ್ದರಿಂದ ಆ ಕಾಲದಲ್ಲಿ ದೇವತೆಗಳು ಪರಮಾತ್ಮನಿಗೆ ದಿವ್ಯವಾದ ಹುಗ್ಗಿ ಪರಮಾನ್ನ ಗಳನ್ನು ನೈವೇದ್ಯಾದಿಗಳಿಂದ ಪೂಜಿಸುವರು ಆದ್ದರಿಂದ ಆಸ್ತಿಕರಾದ ನಾವೂ ಕೂಡ ಆ ಕಾಲದಲ್ಲಿ ಅರುಣೋದಯದಲ್ಲೇ ಪರಮಾತ್ಮನನ್ನು ವಿಧ್ಯುಕ್ತವಾಗಿ ಪೂಜಿಸಿ, ಹುಗ್ಗಿ, ಬೆಣ್ಣೆಯನ್ನು ಸಮರ್ಪಿಸಿದಲ್ಲಿ ೭ ಜನ್ಮಗಳ ಕಷ್ಟ, ದಾರಿದ್ರ್ಯದಿಗಳಿಂದ ನಿವೃತ್ತರಾಗಿ ಸುಖಿಸಬಹುದು.

ಹೇಗೆ ಮಾಡಬೇಕು :—

ಧನುರ್ಮಾಸದಲ್ಲಿ ಪರಮಾತ್ಮನಿಗೆ ಸಮರ್ಪಿಸುವ ನೈವೇದ್ಯಕ್ಕೆ ಹುಗ್ಗಿಯ ಪಾತ್ರವೇ ಅತಿಮುಖ್ಯವಾದದ್ದು. ಇದಕ್ಕೆ ಅಕ್ಕಿ ಹೆಸರುಬೇಳೆ ಸಮ ಪ್ರಮಾಣದಲ್ಲಿದ್ದು ಶುಂಠಿ, ಮೆಣಸು ಇತ್ಯಾದಿ ಸಾಂಬಾರಪದಾರ್ಥ ಗಳಿದ್ದು ತುಪ್ಪ ಹಾಗೂ ಬೆಣ್ಣೆ ಅತ್ಯಾವಶ್ಯಕವಾಗಿರಬೇಕು. ನಂತರ ಯೋಗ್ಯ ವಿಪ್ರಕುಟುಂಬ ಭೋಜನ ಮಾಡಿಸಿದರೆ ಸಕಲದುಃಖ ನಿವೃತ್ತಿ ಹಾಗೂ ಲಕ್ಷ್ಮೀದೇವಿಯ ಅನುಗ್ರಹವಾಗುವುದು. ಭಾನುವಾರ, ವ್ಯತೀಪಾತ, ವೈಧೃತಿ ಯೋಗ ಇರುವ ದಿನ ಕಂಬಳಿ, ಶಾಲು ಇತ್ಯಾದಿಗಳನ್ನು ಪಾತ್ರರಿಗೆ ದಾನಮಾಡಿದರೆ ಅಪಾರ ಫಲವುಂಟೆಂದು ಶಾಸ್ತ್ರ ಹೇಳುತ್ತಿದೆ.

ವ್ಯತೀಪಾತ ಮಹಾಸತ್ತ್ವ ಸರ್ವಪಾಪ ಪ್ರಣಾಶನ ।
ಸಹಸ್ರಶೋ ವಿಶ್ವಾತ್ಮನ್ ಗೃಹಾಣಾರ್ಘ್ಯಂ ನಮೋಸ್ತುತೇ।
ವ್ಯತೀಪಾತ ನಮಸ್ತೇಸ್ತು ನಮಸ್ತೇ ವಿಶ್ವಮಂಗಳ ।
ವಿಷ್ಣುಚಕ್ರ ಸ್ವರೂಪಾಯ ನಮಸ್ತೇ ದಿವ್ಯ ತೇಜಸೇ ॥

ಹೀಗೆಂದು ಹೇಳುತ್ತಾ ಅರ್ಘ್ಯ ಕೊಡಬೇಕು. ಸಾಧನೆ ದ್ವಾದಶಿಯಂತೆ. ಇದರಿಂದ ಬಹು ಪುಣ್ಯಪ್ರಾಪ್ತಿವುಂಟು. ದಕ್ಷಿಣಭಾರತದ ಎಲ್ಲಾ ದೇವಾಲಯ ದಲ್ಲೂ ಧನುರ್ಮಾಸ ಪೂಜಾ ಹಾಗೂ ಪ್ರಸಾದ ವಿನಿಯೋಗ ಅನುಕರಣೀಯ ಆಗಿರುವುದನ್ನು ಕಾಣಬಹುದಾಗಿದೆ. ಇದೇ ಪವಿತ್ರ ಹಿಂದೂ ಧರ್ಮ.

**—ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ**

ಗಳಿಂದ ಮನೆಯ ಬಾಗಿಲುಗಳನ್ನು ದನಕರು
ಳನ್ನು ಸಿಂಗರಿಸುತ್ತಾರೆ.

ಹಬ್ಬದ ಮೊದಲನೆಯದಿನ ಭೋಗಿ. ಅಂದ
ಮನೆಯಲ್ಲಿದ್ದ ಹಳೆಯ ಬಟ್ಟೆಗಳನ್ನು ಸಾಮಾನ
ಗಳನ್ನು, ಮನೆಯ ಮುಂದು ಸುಗ್ಗಿ ಬೆಂಕಿಯನ್ನಿ
ರಿಸಿ ಅದರಲ್ಲಿ ಸುಡಲಾಗುತ್ತದೆ ಪೊಂಗಲ್ ದಿ
ಬೆಳಗ್ಗೆಯೇ ಎಲ್ಲರೂ ಶುಭ್ರಸ್ನಾತರಾಗಿ ಹೊ
ಬಟ್ಟೆಗಳನ್ನು ಧರಿಸುತ್ತಾರೆ ಹೊಸದಾಗಿ ಹೂಡಿ
ಒಂದು ಒಲೆಯ ಮೇಲೆ ಹೊಸ ಮಡಕೆ ಅಥವಾ
ಪಾತ್ರೆಯನ್ನಿಡುತ್ತಾರೆ ಇದಕ್ಕೆ ಪೊಂಗಲ್ ಪಾತ್ರೆ
ಎಂದೇ ಹೆಸರು ಹಲವೆಡೆ ನವವಧುವಿಗೆ ತವರ
ಮನೆಯ ಬಳುವಳಿಗಳಲ್ಲಿ ಇದೂ ಒಂದು. ಇದಕ
ಹಸಿರು ಅರಿಸಿನ ಗಿಡವನ್ನೂ ಕಟ್ಟಿ ಪೂಜಿಸ
ತ್ತಾರೆ. ನಂತರ ಹಾಲು ಹಾಕಿ ಕಾಯಿಸುತ್ತಾರೆ
ಕಾದ ಹಾಲಿಗೆ ಅಕ್ಕಿ ಹಾಕಿ ಅದು ಬೆಂ
ನಂತರ ತುಪ್ಪ, ಬೆಲ್ಲ, ಸೇರಿಸುತ್ತಾರೆ. ಅನ್ನ ಉಕ್ಕಿ
ಸುರಿಯುವಾಗ ಎಲ್ಲರೂ ಪೊಂಗಲ್ ಪೊಂಗಲ
ಎಂದು ಹರ್ಷೋತ್ಸಾಹಗಳಿಂದ ಚಪ್ಪಾಳೆ ತಟ್ಟಿ
ಕೂಗುತ್ತಾರೆ. ಈ ಸಿದ್ಧವಾದ ಪೊಂಗಲ್ ಅನ್ನ
ಸೂರ್ಯನಿಗೆ ನೈವೇದ್ಯಮಾಡಿ ತಾವು ತಿನ್ನು
ತ್ತಾರೆ. ಬಂಧು ಮಿತ್ರರಿಗೂ ನೀಡುತ್ತಾರೆ. ಅದೇ
ಬಂಧು ಮಿತ್ರರ ಮನೆಗೆ ಭೇಟಿಯಿತ್ತು ಪೊಂಗಲ
ಆಯಿತೇ ಎಂದು ವಿಚಾರಿಸಿ, ಸುಖಸೌಭಾಗ್ಯ
ಗಳನ್ನು ಹಾರೈಸುತ್ತಾರೆ ಇತ್ತೀಚೆಗೆ ಪೊಂಗಲ
ಶುಭಾಶಯಗಳನ್ನು ಅಂಚೆಯಲ್ಲಿ ಕಳಿಸುವ ರೂಢಿ
ಹೆಚ್ಚುತ್ತಿದೆ

ಮಾರನೆಯ ದಿನಕ್ಕೆ ಮಾಟ್ಟು ಪೊಂಗಲ
ಎನ್ನುತ್ತಾರೆ. ಆ ದಿನ ಕರುಗಳಿಗೆ ಹಬ್ಬ
ದನಕರುಗಳಿಗೆ ಸ್ನಾನ ಮಾಡಿಸಿ ಅವುಗಳ ಕೊ
ಳಿಗೆ, ಕೊಂಬುಗಳಿಗೆ ಹೂಗಳಿಂದ ಹಾರಗಳಿಂ
ಅಲಂಕರಿಸುತ್ತಾರೆ. ಪೂಜೆ ಮಾಡಿ ಪೊಂಗಲ
ತಿನ್ನುತ್ತಾರೆ. ಅಂದು ಅವುಗಳಿಗೆ ವಿಶ್ರಾಂತಿ
ಮೂರನೆಯ ದಿನ, ಸಾಮಾನ್ಯವಾಗಿ, ಹಿಂ
ಹಳ್ಳಿಗಳಲ್ಲಿ ಹೋರಿಗಾಳಗ ನಡೆಯುತ್ತಿತ್ತು
ಇಂದು ಈ ಸಂಪ್ರದಾಯ ಮಾಯವಾಗುತ್ತಿದೆ
ಹೀಗೆ ಪೊಂಗಲ್ ಅಥವಾ ಸಂಕ್ರಾಂತಿ ತಮಿಳ
ನಾಡಿನಲ್ಲಿ ದೊಡ್ಡವರು, ಮಕ್ಕಳು, ಎಲ್ಲರೂ
ಸಂಭ್ರಮದಿಂದ ನಿರೀಕ್ಷಿಸುವ, ಎದುರು ನೋಡುವ
ಹಬ್ಬವಾಗಿದೆ.

ಆಂಧ್ರ ಪ್ರದೇಶದಲ್ಲಿ ಸಂಕ್ರಾಂತಿಯನ್ನು ಪೆದ್ದ
ಪಂಡುಗ ಎಂದರೆ ದೊಡ್ಡ ಹಬ್ಬ ಎಂದೇ ಕ
ಯುತ್ತಾರೆ. ಆಂಧ್ರದಲ್ಲೂ ಈ ಹಬ್ಬವನ್ನು
ಮೂರುದಿನಗಳಕಾಲ ಆಚರಿಸುತ್ತಾರೆ.

ಹಬ್ಬಕ್ಕೆ ಅನೇಕ ದಿನಗಳ ಮುಂಚೆಯೇ ಮನೆ
ಯನ್ನೆಲ್ಲಿ ಶುಚಿಗೊಳಿಸಿ ಅಲಂಕರಿಸಿರುತ್ತಾರೆ

ಹಬ್ಬದ ದಿನ ಹೆಂಗಸರು ಹಾಗೂ ಹೆಣ್ಣು ಮಕ್ಕಳು ಅಂಗಳವನ್ನು ಶುಚಿಯಾಗಿ ಕಸಗುಡಿಸಿ, ಸಗಣಿ ನೀರನ್ನು ತಳಿದು ಸುಂದರ ರಂಗವಲ್ಲಿಗಳನ್ನು ಚಿತ್ರಿಸಿರುತ್ತಾರೆ. ಅಂಗಳದ ನಡುವೆ, ರಂಗವಲ್ಲಿಗಳ ಮಧ್ಯದಲ್ಲಿ ಸಗಣಿಯ ಗೋಪುರಗಳನ್ನಿಟ್ಟು ಅದರ ಮೇಲೆ ಕುಂಬಳದ ಹೂಗಳನ್ನಿಡುತ್ತಾರೆ. ಹೆಚ್ಚಾಗಿ ಚೆಂಡುಹೂ ಮತ್ತು ಇತರ ಹೂಗಳಿಂದ ಅದರ ಸುತ್ತಲೂ ಇಡುತ್ತಾರೆ. ಹೊಸ ಬಟ್ಟೆಗಳನ್ನು ಧರಿಸಿ ಅಲಂಕರಿಸಿಕೊಂಡ ಹುಡುಗಿಯರು ಕೈ ಕೈ ಹಿಡಿದು ಈ ಗೋಪುರಗಳ ಸುತ್ತ ಹಾಡುತ್ತ ಕುಣಿಯುತ್ತಾರೆ ಈ ವಿಶೇಷವಾದ ಹಾಡುಗಳಿಗೆ ಗೊಬ್ಬಿ ಪಾಟಲು ಎಂದೇ ಹೆಸರಿದೆ. ಗೊಬ್ಬಿ ಎನ್ನುವುದು ಗೋಳಿಸಿ ಎಂಬುದರ ಅಪಭ್ರಂಶ. ಇದು ಕೃಷ್ಣನ ಸುತ್ತ ಗೋಪಿಯರು ಹಾಡುತ್ತ ನರ್ತಿಸುತ್ತಿದ್ದ ರಾಸ ಲೀಲೆಯನ್ನು ನೆನಪಿಸುತ್ತದೆ

ಭೋಗಿ ಹಬ್ಬದಂದು ಬೆಳಗಿನ ಜಾವದಲ್ಲಿ ಅಂಗಳದಲ್ಲಿ ಬೆಂಕಿ ಉರಿಸಿ ಅದರಲ್ಲಿ ಬೇಡದ ಹಳೆಯ ವಸ್ತುಗಳನ್ನು ಸುಡುತ್ತಾರೆ ಅಂದು ಹಾಲು, ಬೆಲ್ಲ, ಅಕ್ಕಿಗಳಿಂದ ಪೊಂಗಲ್ ತಯಾರಿಸಿ ಸೇವಿಸುತ್ತಾರೆ. ಸಾಯಂಕಾಲ ನೆರೆಹೊರೆಯ ಹೆಣ್ಣು ಮಕ್ಕಳನ್ನು ಕರೆದು ಮನೆಯಲ್ಲಿರುವ ಚಿಕ್ಕ ಮಕ್ಕಳಿಗೆ ಹಸೆ ಮಣೆಯ ಮೇಲೆ ಎರೆದು ಆರತಿ ಮಾಡುತ್ತಾರೆ. ಇದು ಒಂದು ರೀತಿಯ ರಕ್ಷೆಯೆಂಬ ಭಾವನೆ ಪ್ರಚಲಿತವಾಗಿದೆ.

ಮಕರ ಸಂಕ್ರಾಂತಿಯಂದು ದಾನ ಧರ್ಮಗಳಿಗೆ ವಿಶೇಷ ಪ್ರಾಶಸ್ತ್ಯವಿದೆ. ಅಂದು ಗಂಡಸರು ಅಳಿದ ಪಿತೃಗಳಿಗೆ ತರ್ಪಣಾದಿಗಳನ್ನು ನೀಡುತ್ತಾರೆ. ಹೆಂಗಸರು ಅರಿಸಿನ ಕುಂಕುಮಾದಿ ಮಂಗಳ ದ್ರವ್ಯಗಳನ್ನು ದಾನ ಮಾಡುತ್ತಾರೆ. ವಿವಿಧ ರೀತಿಯ ಭಕ್ಷ ಭೋಜ್ಯಗಳನ್ನು ತಯಾರಿಸಿ ಸೇವಿಸುತ್ತಾರೆ. ಮಾರನೆಯ ದಿನ ಧನಕರುಗಳಿಗೆ ಹಬ್ಬ ಅವುಗಳಿಗೆ ಸ್ನಾನ ಮಾಡಿಸಿ, ಅಲಂಕರಿಸಿ, ವಿಶೇಷ ಆಹಾರಗಳನ್ನು ನೀಡಿ, ಪೂಜಿಸಿ ಸಂತೋಷಿಸುತ್ತಾರೆ. ಹೋರಿಕಾಳಗ ಕೋಳಿಅಂಕ ಮುಂತಾದ ವಿನೋದಗಳೂ ನಡೆಯುತ್ತವೆ.

ಆಂಧ್ರದ ಹಲವೆಡೆಗಳಲ್ಲಿ ಒಂದು ವಿಶೇಷವಾದ ಪೂಜೆ ಈ ಸಮಯದಲ್ಲಿ ನಡೆಯುತ್ತದೆ. ಮನೆಯ ಒಂದು ಪ್ರಶಸ್ತವಾದ ಜಾಗದಲ್ಲಿ ರಂಗವಲ್ಲಿಗಳಿಂದ ಅಲಂಕರಿಸಿ ಮಂಟಪವನ್ನು ಇಡುತ್ತಾರೆ. ಈ ಮಂಟಪವನ್ನು ಆ ಕಾಲದಲ್ಲಿ ದೊರುಕುವ ಹಣ್ಣು, ಹೂ, ತರಕಾರಿಗಳಿಂದ ಅಲಂಕರಿಸುತ್ತಾರೆ. ಈ ಮಂಟಪದಲ್ಲಿ ಹರವಿದ ಅಕ್ಕಿಯಮೇಲೆ ಮಣ್ಣಿನಿಂದ ಮಾಡಿದ ಗೌರಿ ವಿಗ್ರಹವನ್ನು ಇಟ್ಟು, ಪೂಜಿಸುತ್ತಾರೆ ಮೂರುದಿನಗಳು ನಡೆಯುವ ಈ ಹಬ್ಬಕ್ಕೆ ಅಕ್ಕ ಪಕ್ಕದ ಹೆಂಗಸರನ್ನು ಅರಿಸಿನ ಕುಂಕುಮಕ್ಕೆ ಕರೆದು ತಾಂಬೂಲಾದಿಗಳನ್ನು ಕೊಡುತ್ತಾರೆ. ನಾಲ್ಕನೆಯ ದಿನ ಗೌರಿಯನ್ನು ಕೆರೆ ಅಥವಾ ಬಾವಿಗೆ ಒಯ್ದು ಅದರಲ್ಲಿ ವಿಸರ್ಜಿಸುತ್ತಾರೆ. ಅಂದು ವಿಶೇಷವಾಗಿ ಪುಳಿಯೋಗರೆ ಮೊಸರನ್ನ ಮುಂತಾದುವುಗಳನ್ನು ತಯಾರಿಸಿ, ಒಟ್ಟಾಗಿ ತಿಂದು ಸಂತೋಷಿಸುತ್ತಾರೆ ಗೌರಿಯನ್ನು ವಿಸರ್ಜಿಸಿದ ನಂತರ, ಮಂಟಪಕ್ಕೆ ತೂಗುಹಾಕಿದ್ದ ತರಕಾರಿಗಳಿಂದ ಹುಳಿ ಅಥವಾ ಪಲ್ಯವನ್ನು ತಯಾರಿಸುತ್ತಾರೆ ಇದಕ್ಕೆ ಗೊಬ್ಬಿಕೂರ ಎಂದು ಹೆಸರು ಇದು ದೇಹಾರೋಗ್ಯ ವರ್ಧಕವೆಂಬ ನಂಬಿಕೆಯಿದೆ. ಕೆಲವೆಡೆಗಳಲ್ಲಿ ಗೊಂಬೆಗಳ ಪ್ರದರ್ಶನವೂ ನಡೆಯುವುದುಂಟು. ದೇವಸ್ಥಾನಗಳಲ್ಲಿ ವಿಶೇಷವಾಗಿ ಬೆಳಗಿನ ಹೊತ್ತುಗಳಲ್ಲಿ ಪೊಂಗಲ್ ಅನ್ನು ಭಕ್ತಾದಿಗಳಿಗೆ ಹಂಚುತ್ತಾರೆ ಹೀಗೆ ಸಂಕ್ರಾಂತಿ ಆಂಧ್ರ ಪ್ರದೇಶದಲ್ಲಿ ಹರ್ಷೋತ್ಸಾಹಗಳಿಂದ ನಡೆಯುತ್ತದೆ

ಕರ್ನಾಟಕದಲ್ಲಿ ಭೋಗಿ, ಸಂಕ್ರಮಣ, ಕನೂ ಹಬ್ಬ ಎಂಬ ಹೆಸರುಗಳಲ್ಲಿ ಮೂರುದಿನಗಳ ಕಾಲ ಯುವ ಸಂಕ್ರಾಂತಿ ಬಹು ಉಲ್ಲಾಸಪೂರ್ಣವಾಗಿರುತ್ತದೆ. ಭೋಗಿ ಹಬ್ಬದಂದು ವಿಶೇಷವಾದ ಪೂಜಾದಿಗಳನ್ನು ಮಾಡಿ ಬ್ರಾಹ್ಮಣಸುವಾಸಿನಿಯರಿಗೆ ಭೋಗಿ–ಎಂದರೆ ಆಹಾರ ಪದಾರ್ಥಗಳು, ಹಣ್ಣು ಹಂಪಲು ತರಕಾರಿಗಳನ್ನು–ದಾನನೀಡಲಾಗುತ್ತೆ. ಧನುರ್ಮಾಸದ ಕೊನೆಯ ದಿನವಾದ ಅಂದು ಹುಗ್ಗಿ ಸಿಹಿಕುಂಬಳ ಕಾಯಿ ತೊವ್ವೆ ಮುಂತಾದ ವಿಶೇಷ ಅಡುಗೆಗಳನ್ನು ತಯಾರಿಸಿ ಸೇವಿಸುತ್ತಾರೆ. ಮಾರನೆಯದಿನದ ಸಡಗರ ಅಂದೇ ಎಲ್ಲ ಕಡೆಗಳಲ್ಲೂ ಕಾಣಬರುತ್ತಿರುತ್ತೆ.

ಸಂಕ್ರಾಂತಿಯಂದು ಅನುಕೂಲವಿದ್ದವರು, ಪುಣ್ಯ ನದೀತೀರ್ಥಗಳಿಗೆ ಹೋಗಿ, ಪವಿತ್ರಸ್ನಾನ ಮಾಡಿ ಶ್ರಾದ್ಧಾದಿ ಕರ್ಮಗಳನ್ನು ತರ್ಪಣಾದಿಗಳನ್ನೂ ಮಾಡುತ್ತಾರೆ. ಅಂದು ವಿಶೇಷವಾದ ದಾನಗಳಿಗೆ ಬಹು ಪ್ರಾಶಸ್ತ್ಯವುಂಟು. ಹೊಸದಾಗಿ ಬಂದ ಭತ್ತ ಅಥವಾ ಅಕ್ಕಿ, ಕುಂಬಳಕಾಯಿ ಎಳ್ಳು, ಪಾತ್ರೆಗಳು, ವಸ್ತ್ರಗಳು ಏನನ್ನು ಬೇಕಾದರೂ ದಾನ ನೀಡಬಹುದು. ಮುತ್ತೈದೆಯರು ಅದರಲ್ಲೂ ಹೊಸದಾಗಿ ಮದುವೆಯಾದವರು, ಸುಮಂಗಲಿಯರಿಗೆ ಅರಿಸಿನ ಕುಂಕುಮ, ಬಳೆ, ತೆಂಗಿನಕಾಯಿ, ಹಣ್ಣು ಹಂಪಲು ಮುಂತಾದ ಮಂಗಳ ದ್ರವ್ಯಗಳನ್ನು ತಾಂಬೂಲ ನೀಡಿ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ಸಂಕ್ರಾಂತಿಯಂದು ಶಂಕೆಯಿಲ್ಲದಷ್ಟು ದಾನ ಮಾಡು ಎಂಬ ವಚನವುಂಟು. ನಂತರ ದೇವರಿಗೆ, ಹುರಿದ ಬಿಳಿ ಎಳ್ಳು, ಹುರಿದ ಕಡಲೆಕಾಯಿ ಬೀಜ, ಹುರಿಗಡಲೆ ಹೆಚ್ಚಿದ ಬೆಲ್ಲದ ಚೂರುಗಳು ಮತ್ತು ಒಣಕೊಬ್ಬರಿ ಚೂರುಗಳನ್ನು ಬೆರಸಿದ ಮಿಶ್ರಣವನ್ನು ನೈವೇದ್ಯ ಮಾಡುತ್ತಾರೆ. ಕಿರಿಯರು ಹಿರಿಯರಿಗೆ ಎಳ್ಳು ಬೆಲ್ಲದ ಮಿಶ್ರಣ ಕೊಟ್ಟು ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ ಒಬ್ಬರಿಗೊಬ್ಬರು ಎಳ್ಳುಕೊಟ್ಟು 'ಎಳ್ಳು ಬೆಲ್ಲ ತಿಂದು ಒಳ್ಳೆಮಾತಾಡು' ಎಂದು ಹಾರೈಸುತ್ತಾರೆ ಪೊಂಗಲ್ ಹೋಳಿಗೆ ಮುಂತಾದ ಅಡುಗೆಗಳನ್ನು ಪಕ್ವಮಾಡಿ ಊಟಮಾಡುತ್ತಾರೆ

ಸಾಯಂಕಾಲ ಹೆಣ್ಣು ಮಕ್ಕಳಿಗೆ ಬಹಳ ಸಡಗರ. ಮನೆಯ ಎಳೆಯ ಮಕ್ಕಳನ್ನು ಸಿಂಗರಿಸಿ, ತಾವೂ ಅಲಂಕರಿಸಿಕೊಂಡು, ಬಂಧು ಮಿತ್ರರ ಮನೆಗಳಿಗೆ ಹೋಗಿ, ಮೇಲೆ ಹೇಳಿದ ಎಳ್ಳಿನ ಮಿಶ್ರಣ, ಸಕ್ಕರೆ ಅಚ್ಚು, ಕಬ್ಬಿನ ತಂಡು, ಬಾಳೆ ಹಣ್ಣು ಮುಂತಾದವುಗಳನ್ನು ಕೊಟ್ಟು ಬರುತ್ತಾರೆ. ಇದಕ್ಕೆ ಎಳ್ಳು ಬೀರುವುದು ಎಂದು ಹೆಸರು. ಈ ಸಮಯದಲ್ಲಿ ಹೆಣ್ಣು ಮಕ್ಕಳಲ್ಲಿ ಅವರ ಕಲಾಕುಶಲತೆಯ ಸ್ಪರ್ಧೆಯೇ ನಡೆಯುತ್ತದೆ ಎನ್ನಬಹುದು ಎಳ್ಳನ್ನು ಹಾಕಲು ವಿವಿಧ ರೀತಿಯ ವಸ್ತುಗಳಲ್ಲಿ ಬಟ್ಟಲು, ಡಬ್ಬಿ ಮುಂತಾದವುಗಳನ್ನು ತಯಾರಿಸಿರುತ್ತಾರೆ ವರುಷ ತುಂಬದ ಎಳೆಯ ಮಕ್ಕಳಿದ್ದರೆ, ಬೆಳ್ಳಿಯ ಬಟ್ಟಲು, ಬೆಳ್ಳಿಯ ಅಂಬೆಗಾಲು ಕೃಷ್ಣ ಮುಂತಾದುವನ್ನೂ ಕೊಡುವುದುಂಟು ನಂತರ ಮಕ್ಕಳನ್ನು ಹಸೆ ಮಣೆಯ ಮೇಲೆ ಕೂಡಿಸಿ ಎಲಚಿ ಹಣ್ಣುಗಳೂ, ಕಾಸುಗಳು, ಕಬ್ಬಿನ ಚೂರುಗಳನ್ನು ಅವರ ತಲೆಯ ಮೇಲೆರೆದು ಆರತಿ ಮಾಡುತ್ತಾರೆ. ಇದು ಮಕ್ಕಳಿಗೆ ರಕ್ಷೆ ಎಂದು ಭಾವಿಸುತ್ತಾರೆ.

ಮೂರನೆಯದಿನ ದನಕರುಗಳ ಹಬ್ಬ ಅಂದು ಅವುಗಳಿಗೆ ಸ್ನಾನ ಮಾಡಿಸಿ, ಹೊಸ ಬಟ್ಟೆಗಳನ್ನು ಹೊದಿಸಿ, ಕೊರಳಿಗೆ ಗಂಟೆಗಳ, ಹೂಗಳ ಸುಂದರ ಹಾರಗಳನ್ನು ಹಾಕಿ, ಕೊಂಬುಗಳಿಗೆ, ಚಿನ್ನಾರಿ ಕಾಗದ ತುರಾಯಿಗಳನ್ನು ಕಟ್ಟುತ್ತಾರೆ ನಂತರ ಅಕ್ಕ ಪಕ್ಕದವರೆಲ್ಲ ಒಟ್ಟುಗೂಡಿ ದನಕರುಗಳನ್ನು ಮೆರವಣಿಗೆಯಲ್ಲಿ ಕರೆದೊಯ್ಯುತ್ತಾರೆ ಇದೊಂದು ಅತಿ ಸುಂದರವಾದ ದೃಶ್ಯ ಮೆರವಣಿಗೆಯ ಮುಂದೆ ಓಲಗ ಊದಿಕೊಂಡು ಹೋಗುವುದು ಉಂಟು. ನಂತರ ಒಂದು ಕಡೆ ಒಟ್ಟಾಗಿ ಸೇರಿ, ಅಲ್ಲಿ ಒಂದು ಕಿಚ್ಚನ್ನುರಿಸಿ ಅದರ ಮೇಲೆ ಈ ದನಕರುಗಳನ್ನು ಹಾರಿಸುತ್ತಾರೆ. ಇದಕ್ಕೆ ಕಿಚ್ಚು ಹಾಯಿಸುವುದು ಎಂದು ಹೆಸರು ಇದರಿಂದ ದನಕರುಗಳಿಗೆ ವರ್ಷ ಇಡೀ ರಕ್ಷೆ ಇರುತ್ತದೆ ಎಂಬ ನಂಬಿಕೆಯಿದೆ. ಅಂದು ಅವುಗಳಿಗೆ ವಿಶ್ರಾಂತಿ. ರೈತರು ವಿವಿಧ ವಿನೋದಾವಳಿಯಲ್ಲಿ ತೊಡಗಿ ಆನಂದದಿಂದ ಕಾಲಕಳೆಯುತ್ತಾರೆ ಹೀಗೆ ಸಂಕ್ರಾಂತಿ ಕರ್ನಾಟಕದಲ್ಲಿ ಬಹು ಸಂಭ್ರಮಪೂರ್ಣವಾಗಿ ನಡೆಯುತ್ತದೆ.

# ಭಕ್ತಿ ಪಾರಮ್ಯ

ಜಗತ್ತಿನ ಇತಿಹಾಸದಲ್ಲಿಯೆ ಭರತಖಂಡ ಬಹು ಪ್ರಾಚೀನ ಪರಂಪರೆಯುಳ್ಳ ರಾಷ್ಟ್ರ. ಭಿನ್ನತೆಯಲ್ಲಿ ಏಕತೆಯನ್ನು ಸಾಧಿಸಿ ಸಹಸ್ರಾರು ವರ್ಷಗಳಿಂದ ನಾನಾ ತರಹದ ಆಘಾತಗಳಿಗೆ ಒಳಗಾದರೂ ತನ್ನ ವಿಶಿಷ್ಟ ಗುಣಗಳಾದ ಧರ್ಮಾಚರಣೆ ದೈವ ನಿಷ್ಠೆ, ನಂಬಿಕೆ. ದಾನಧರ್ಮ, ಸಾಧು ಸಜ್ಜನರಲ್ಲಿ ಗುರುಹಿರಿಯರಲ್ಲಿ ಪ್ರೀತಿ, ಭಕ್ತಿ ಅನ್ಯ–ಮತ ಸಹಿಷ್ಣುತೆ–ಇವುಗಳನ್ನು ಉಳಿಸಿಕೊಂಡು ಬಂದಿದೆ ಈ ಗುಣಗಳು ಶತಮಾನಗಳು ಕಳೆದರೂ ಜನಜೀವನದಲ್ಲಿ ಓತಪ್ರೋತವಾಗಿ ಹರಿಯುತ್ತಿರಬೇಕೆಂದು ಕಾಲಕಾಲಕ್ಕೆ ಅನೇಕ ಮಹನೀಯರುಗಳು, ದಾರ್ಶನಿಕರು, ಮತಾಚಾರ್ಯರು, ಸಂತರು ಹುಟ್ಟಿ ಭಾರತೀಯ ಸಂಸ್ಕೃತಿಯ ತಳಹದಿಯನ್ನು ಮತ್ತಷ್ಟು ಭದ್ರವಾಗಿಸಿದರು. ಅವರಲ್ಲಿ ಹಲವರು ಮುಖ್ಯವಾಗಿ ಜನ ಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರಿಗೂ ದೈವದ ಅನುಗ್ರಹ ಒದುಗುವ ಹಾಗೆ ಕರ್ಮ ಜ್ಞಾನಮಾರ್ಗಗಳಿಂದ ಭಿನ್ನವಾದ ಸರಳವೂ ಸುಲಭವೂ ಆದ ಭಕ್ತಿಮಾರ್ಗವನ್ನು ತೋರಿಸಿದರು. ಇಡೀ ಭರತ ಭೂಮಿಯಲ್ಲಿ ಭಕ್ತಿ ಪಂಥವೆಂಬುದು ರಾರಾಜಿಸಿತು ಶ್ರೀ ಚೈತನ್ಯದೇವ, ಜೀವಗೋಸ್ವಾಮಿ, ಕೃಷ್ಣದಾಸ, ರಾಮದಾಸ, ಮೀರಾಬಾಯಿ ಮೊದಲಾದವರು ಭಕ್ತಿಪಂಥದ ಪ್ರಮುಖರಾದರು. ಕರ್ನಾಟಕದಲ್ಲಿಯೂ ಈ ಭಕ್ತಿ ಪಂಥ ಪ್ರಾರಂಭಿಸಿ ಸಾಮಾನ್ಯರಿಗೂ ಭಕ್ತಿಮಾರ್ಗವನ್ನು ತೋರಿದವರು ಶಿವಶರಣರು ಮತ್ತು ಹರಿದಾಸರು. ಇವರುಗಳಿಂದ ಕನ್ನಡ ನಾಡಿನಲ್ಲಿ ಭಕ್ತಿ ಭಾಗೀರಥಿ ಪ್ರವಹಿಸಿತು. ದಾಸರಲ್ಲಿ ದಾಸಶ್ರೇಷ್ಠರೆನಿಸಿಕೊಂಡ ಪುರಂದರದಾಸರು ಅಗ್ರಗಣ್ಯರಾಗಿ ಕನ್ನಡನಾಡಿನಲ್ಲೆಲ್ಲೂ ಸಂಚರಿಸಿ ಜನಮನದಲ್ಲಿ ಹರಿಭಕ್ತಿಯ ಬೀಜವನ್ನು ಬಿತ್ತಿ ಅವರಿಗೆ ಆತ್ಮೋದ್ಧಾರದ ಮಾರ್ಗವನ್ನು ತೋರಿಕೊಟ್ಟರು.

ಪುರಂದರದಾಸರ ರಚನೆಗಳನ್ನು ಪರಿಶೀಲಿಸಿದಾಗ ಆತ್ಮನಿವೇದನೆ, ತತ್ತ್ವಜ್ಞಾನದರ್ಶನ, ಭಕ್ತಿ, ವೈರಾಗ್ಯ, ಸಮಾಜ ಜೀವನದ ವಿಮರ್ಶೆ– ಹೀಗೆ ಅವುಗಳನ್ನು ವಿಂಗಡಿಸಬಹುದು.

ಪುರಂದರದಾಸರ ಭಕ್ತಿ ಮತ್ತು ತತ್ತ್ವಜ್ಞಾನಗಳನ್ನು ವಿವೇಚಿಸಿದಾಗ ಅವರ ರಚನೆಗಳಲ್ಲಿ ವೇದೋಪನಿಷತ್ತು, ಭಗವದ್ಗೀತೆಗಳ ಸಾರವನ್ನೆಲ್ಲಾ ಸರಳವಾದ ಮಾತುಗಳಲ್ಲಿ ಹೇಳಿರುವುದು ವ್ಯಕ್ತವಾಗುತ್ತದೆ. ಹರಿಯ ಒಲುಮೆಯನ್ನು ಪಡೆಯುವ ಸುಲಭೋಪಾಯವೆಂದರೆ ನಿರ್ಮಲಭಕ್ತಿಯಿಂದ ಆತನನ್ನು ಪೂಜಿಸುವುದೇ ಆಗಿದೆ, ಎಂಬುದನ್ನು ದಾಸರು ಹೀಗೆ ಹೇಳಿದ್ದಾರೆ

ಸಕಲ ಸಾಧನಕೆಲ್ಲ ಸಿದ್ಧಗೊಳಿಸುವುದು
ಭಕುತಿ ಸಾಧನವಲ್ಲದನ್ಯ ಸಾಧನವುಂಟೆ?
ಭಕುತಿಗಭಿಮಾನಿ ಭಾರತಿಯ ಕರುಣದಿಂ
ಮುಕುತಿಗೆ ಪಥವೆಂದು
ಮನವಿಟ್ಟು ಭಜಿಸಿರೋ
ಅಖಿಳೇಶ ಪುರಂದರ ವಿಠಲ ತಾನೊಲಿವ

ಪುರಂದರದಾಸರು ಬಹುಕಾಲ ಸಂಸಾರದ ಬಂಧನದಲ್ಲಿದ್ದು ಯಾವುದೋ ಒಂದು ಕ್ಷಣದಲ್ಲಿ ವೈರಾಗ್ಯಹುಟ್ಟಿ ತಮ್ಮ ಸರ್ವ ಸಂಪತ್ತನ್ನು ದಾನಮಾಡಿ ತುಳಸೀಮಾಲೆ ಧರಿಸಿ, ಗೋಪಾಳ ಬುಟ್ಟಿ ಹಿಡಿದು ಹರಿನಾಮವನ್ನು ಜಪಿಸುತ್ತ ಅವನ ಅನಂತ ಲೀಲಾ ವಿನೋದಗಳನ್ನು ಹಾಡುತ್ತ ಅಲೌಕಿಕ ಆನಂದಾನುಭವವನ್ನು ಹೊಂದಿದರು. ಆ ಭಕ್ತ ಜೀವ ತಾನು ಪಡೆದ ಆನಂದವನ್ನು ತನ್ಮಯವಾಗಿ ವರ್ಣಿಸಿರುವುದನ್ನು ಕಾಣಬಹುದು.

ಆ ಪಾದ ಆನಂದ ಆ ನಖ ಆನಂದ
ಆ ಜಾನು ಜಂಘೆ ಆನಂದಮಯವಯ್ಯ
ಆ ಊರು ಆನಂದ ಆ ಕಟಿ ಆನಂದ
ಆ ಉರ ಆನಂದ ಆ ಭುಜ ಆನಂದ
ಆ ಕಂಠ ಆ ಮುಖ ಆನಂದಮಯವಯ್ಯ
ಆ ಶಿರೋರುಹಗಳು ಆನಂದಮಯವಯ್ಯ
ಆ ಸರ್ವಾಂಗದ ಅವಯಗಳಲ್ಲಿ
ಆನಂದಮಯವಯ್ಯ ಪುರಂದರವಿಠಲ

ಹೀಗೆ ದಾಸರ ಹಾಡುಗಳಲ್ಲಿ ಭಕ್ತಿರಸ ಏಕಧಾರೆಯಾಗಿ ಪ್ರವಹಿಸಿದೆ. ಅವುಗಳನ್ನು ಓದಿದಾಗ ಮೈಪುಳಕಿತವಾಗಿ ಭಕ್ತಿಯ ಮಹಿಮೆ ಅರಿವಾಗುತ್ತದೆ

ಶ್ರೀಹರಿಯಲ್ಲಿ ಅನನ್ಯವಾದ ಭಕ್ತಿ ಭಾವವನ್ನು ಹೊಂದಿದ್ದ ಪುರಂದರದಾಸರು ಹರಿನಾಮದ ಮೇಲ್ಮೆಯನ್ನು ಸಾರಿದ್ದಾರೆ.

"ನೀನ್ಯಾಕೋ ನಿನ್ನ ಹಂಗ್ಯಾಕೋ
ನಿನ್ನ ನಾಮದ ಬಲವೊಂದಿದ್ದರೆ ಸಾಕೋ"
"ಕಲಿಯುಗದೊಳು ಹರಿನಾಮವ ನೆನೆದರೆ
ಕುಲಕೋಟಿಗಳುದ್ಧರಿಸುವುವೈ"

ಈ ಹಾಡುಗಳಲ್ಲಿ ಮಾನವಕೋಟಿಗೆ ಒಂದು ಭರವಸೆ ನೀಡಿದ್ದಾರೆ

ಜನ ಸಾಮಾನ್ಯರಿಗೆ ಜಪತಪ ಯೋಗ, ವ್ರತ, ವೇದ ಉಪನಿಷತ್‌ಗಳು ನಿಲುಕದೇ ಹೋಗಬಹುದು. ಆದರೆ ಶುದ್ಧ ಮನಸ್ಸಿನಿಂದ ಶ್ರೀಹರಿ ನಾಮವನ್ನು ಉಚ್ಚರಿಸಿ ಕೃತಾರ್ಥರಾಗಬಹುದೆಂದು ತಿಳಿಸಿದ್ದಾರೆ. ಅವರದೇ ಒಂದು ಕೀರ್ತನೆಯಲ್ಲಿ ಪುರಂದರ ವಿಠಲನೆಂಬ ಹೆಸರಿನ ಕಲ್ಲು ಸಕ್ಕರೆಯ



**ಶ್ರೀ ಸಿ. ನಂ. ಕೃಷ್ಣಮೂರ್ತಿ**

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ—517501

ವಿಶಿಷ್ಟ ಗುಣಗಳನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ. ಹರಿನಾಮವೆಂಬ ಅಮೂಲ್ಯವಾದ ಸರಕನ್ನು ಎತ್ತು ಹೇರುಗಳಿಂದ ಹೊತ್ತು ಮಾರುವಂತಿಲ್ಲ. ಗೋಣಿಚೀಲಗಳಲ್ಲಿ ತುಂಬುವಂತಿಲ್ಲ. ಸುಂಕ ಕೊಡಬೇಕೆನ್ನುವ ಭಯವಿಲ್ಲ ನಷ್ಟವಾಗುವುದಾಗಲಿ ಕೆಟ್ಟುಹೋಗುವುದಾಗಲಿ ಸಾಧ್ಯವಿಲ್ಲ ಸಂತೆಗೆ ಸಾಗಿಸಿ ಮಾರುವ ಅವಶ್ಯಕತೆಯೂ ಇಲ್ಲ. ಆದರೂ ಈ ಸರಕು ನಮಗೆ ಅಪಾರವಾದ ಲಾಭ ದೊರಕಿಸುತ್ತದೆ. ಹರಿನಾಮವೆಂಬ ಕಲ್ಲುಸಕ್ಕರೆಯನ್ನು ಸವಿದವರಿಗೆ ಮಾತ್ರ ಗೊತ್ತು, ಅದರ ರುಚಿಯೆಂದು ಸಾರಿದ್ದಾರೆ.

"ಒಂದೆ ನಾಮದೊಳಡಗಿದವು
ಅಡಗಿದವು ಆನಂದದಿಂದುಸುರುವ
ಅಖಿಳವೇದಗಳು"
"ಹರಿನಾಮದರಗಿಣಿಯು
ಹಾರುತಿದೆ ಜಗದಿ
ಪರಮ ಭಾಗವತರು ಬಲೆಯ
ಬೀಸುವರು"
"ರಾಮನಾಮ ಪಾಯಸಕ್ಕೆ ಕೃಷ್ಣ
ನಾಮ ಸಕ್ಕರೆ ವಿಠಲನಾಮದ ತುಪ್ಪವ
ಬೆರಸಿ ಬಾಯಿ ಚಪ್ಪರಿಸಿರೋ"

ಹೀಗೆ ಪುರಂದರದಾಸರ ಅನೇಕ ಹಾಡುಗಳಲ್ಲಿ ಅವರ ಅಂತರಂಗದಿಂದ ಮೂಡಿಬಂದ ಭಕ್ತಿ ಜಲಧಾರೆಯಲ್ಲಿ ಕೇಳುವವರೂ ಮುಳುಗಿ ಪುನೀತರಾಗಬಹುದು. ಅವರ ಹಾಡುಗಳು ಎಷ್ಟೊಂದು ಭಾವ ಪೂರ್ಣವಾಗಿರುತ್ತದೆ ಎಂಬುದಕ್ಕೆ ಮತ್ತೊಂದು ರಚನೆಯನ್ನು ಉದಾಹರಿಸಬಹುದು.

ಬಲಿಯ ಮನೆಗೆ ವಾಮನ ಬಂದಂತೆ
ಭಗೀರಥಗೆ ಶ್ರೀ ಗಂಗ ಬಂದಂತೆ
ಮುಚುಕುಂದಗೆ ಶ್ರೀಮುಕುಂದ ಬಂದಂತೆ
ವಿಭೀಷಣನ ಮನೆಗೆ ಶ್ರೀ ರಾಮ ಬಂದಂತೆ
ನಿನ್ನ ನಾಮವು ಬಂದು ಎನ್ನ ನಾಲಿಗೆಯಲಿ
ನಿಂದು ಸಲಹಲಿ ಪುರಂದರ ವಿಠಲ

ತಮ್ಮ ನಿಷ್ಕಾಮ ಭಕ್ತಿಯಿಂದ ತಮ್ಮನ್ನು ಶ್ರೀಹರಿಗೆ ಸಮರ್ಪಣೆ ಮಾಡಿಕೊಂಡ ದಾಸರು ತಮ್ಮ ಹಾಡುಗಳಲ್ಲಿ ಭಕ್ತಿಯ ಮಹಿಮೆಯನ್ನು ವಿಧವಿಧವಾಗಿ ಬಣ್ಣಿಸಿ ಜನಮನದಲ್ಲಿ ದೈವಭಕ್ತಿಯು ಬಲವಾಗಿ ನಾಟುವಂತೆ ಮಾಡಿದರು.

ಪುರಂದರ ದಾಸರ ರಚನೆಗಳಲ್ಲಿ ಕಂಡು ಬರುವ ತಾತ್ತ್ವಿಕ ವಿಚಾರಗಳನ್ನು ಅವರು ಸಾಧಿಸಿರುವ ಆಧ್ಯಾತ್ಮಿಕ ಸತ್ಯವನ್ನು ಗುರುತಿಸಿದಾಗ, ಅವರ ಹಾಡುಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತ ಪುರಾಣಗಳ ಸಾರಸರ್ವಸ್ವವೂ ಅಡಕವಾಗಿರುವುದು ಸ್ಪಷ್ಟವಾಗುತ್ತದೆ.

ಅವರ ಗುರುಗಳಾದ ಶ್ರೀ ವ್ಯಾಸರಾಯರು ಪುರಂದರದಾಸರ ಕೃತಿಗಳನ್ನು ಪುರಂದರೋಪನಿಷತ್ತು ಎಂದು ಕರೆದಿರುವುದು ಎಷ್ಟು ಸತ್ಯವಾದದ್ದು ಎಂಬುದು ವೇದ್ಯವಾಗುತ್ತದೆ.

ಈ ಪ್ರಪಂಚದಲ್ಲಿ ನಾವು ಹೇಗೆ ಬದುಕಬೇಕು, ಇಹದ ಬದುಕಿನೊಂದಿಗೆ ಎಂಥ ಅನುಸಂಧಾನವನ್ನು ಹೊಂದಿರಬೇಕೆಂಬುದನ್ನು ದಾಸರು ಅರ್ಥಗರ್ಭಿತವಾಗಿ ಹೇಳಿದ್ದಾರೆ. 'ಕೆರೆಯ ನೀರನ್ನು ಕೆರೆಗೆ ಚೆಲ್ಲಿರೋ' ಎಂಬಂತೆ ನಿರ್ಲಿಪ್ತಭಾವನೆಯನ್ನು ಬೆಳೆಸಿಕೊಳ್ಳಬೇಕು. ಹೆಂಡತಿ, ಮಕ್ಕಳು, ಬಂಧು ಬಳಗ ಎಲ್ಲವೂ ಪರಮಾತ್ಮನ ಸೇವೆಗೆ ಸಾಧನವೆಂದು ತಿಳಿಯಬೇಕು. ಈ ಬಾಳು ನೀರ ಮೇಲಣಗುಳ್ಳೆಯ ಹಾಗೆ ಎಷ್ಟು ಕ್ಷಣಿಕ ಎಂಬುದನ್ನು ದಾಸರು ತಮ್ಮ ರಚನೆಯಲ್ಲಿ ಹೀಗೆ ತಿಳಿಸಿದ್ದಾರೆ

ಹೀಗೆ ಬರೆದೀತು ಪ್ರಾಚೀನದಲ್ಲಿ
ಹಾಗೆ ಇರಬೇಕು ಸಂಸಾರದಲ್ಲಿ
ಪಕ್ಷಿ ಕೂತಿತು ಬಂದು ಅಂಗಳದಲ್ಲಿ
ಹಾರಿಹೋಯಿತು ಆ ಕ್ಷಣದಲ್ಲಿ
ಆಡುವ ಮಕ್ಕಳು ಮನೆ ಕಟ್ಟಿದರು
ಆಟ ಸಾಕೆಂದು ಮುರಿದೋಡಿದರು
ಸಂತೆ ನೆರೆದೀತು ನಾನಾ ಪರಿ
ತಿರಿಗಿ ಹೋಯಿತು ತಮ್ಮ ತಮ್ಮ ದಾರಿ
ವಸ್ತಿಕಾರ ವಸ್ತಿಗೆ ಬಂದ
ಹೊತ್ತಾರೆ ಎದ್ದು ಊರಿಗೆ ಹೋದ
ಈ ಸಂಸಾರ ಮಾಯ ಬಿಡಿಸಿ
ಕಾಯೋ ಪುರಂದರ ವಿಠಲ

ನಶ್ವರವಾದ ಈ ದೇಹವನ್ನು ನಂಬಿ ಕೆಡಬಾರೆಂದು ಎಚ್ಚರಿಸಿದ್ದಾರೆ.

ನೆಲಯು ಇಲ್ಲದ ಕಾಯವೆಲುಬಿನ ಪಂಜರ
ಒಲಿದು ಸುತ್ತಿದ ಚರ್ಮದ ಹೊದಿಕೆ
ಮಲಮೂತ್ರಗಳಿರವು ಕೀವು ಕ್ರಿಮಿಗಳು
ಬರಿಯ ತೊಗಲ ಮೆಚ್ಚಿ ಕೆಡಬೇಡಿರೋ
ಬಟ್ಟೆಯ ನೀರೊಳಗದ್ದಿ ಒಣಗಿಸಿ
ಉಟ್ಟುಕೊಂಡರೆ ಅದು ಮಡಿಯಲ್ಲ
ಹೊಟ್ಟೆಯೊಳಗಿನ ಕಾಮ ಕ್ರೋಧವ
ಬಿಟ್ಟು ನಡೆದರೆ ಅದು ಮಡಿಯು
ಇಚ್ಛೆಯಿಂದ ಮಲಮೂತ್ರ ಶರೀರವ
ನೆಚ್ಚಿ ತೊಳೆಯಲು ಅದು ಮಡಿಯೆ
ಅಚ್ಯುತಾನಂದನ ನಾಮವ ನೆನೆದು
ಸಚ್ಚಿತ್ತದಿ ನಡೆದರೆ ಅದು ಮಡಿಯು

ತೋರಿಕೆಯ ಭಕ್ತಿ ಪ್ರದರ್ಶನ ಮಾಡುವವರನ್ನು ಟೀಕಿಸಿದ್ದಾರೆ.

"ಮಂಡೆ ಬೋಳಾದರೆ ಸಾಲದು
ಮನ ಬೋಳಾಗಬೇಕು''
"ಘಾತಕತನವನು ಬಿಡದೆ ನಿರಂತರ
ಗೀತೆಯ ನೋಡಿದರೇನು ಫಲ"

ಎಂದು ಪ್ರಶ್ನಿಸಿದ್ದಾರೆ. ಮದ ಮತ್ಸರ ಕ್ರೋಧಗಳನ್ನು ಒಳಗೆ ತುಂಬಿಟ್ಟುಕೊಂಡು ಐಹಿಕ ಸುಖಕ್ಕಾಗಿ ಹಾತೊರೆಯುತ್ತ ಬಹಿರಂಗದಲ್ಲಿ ವ್ರತ ನೇಮಗಳನ್ನು ಆಚರಿಸುವ ಡಾಂಭಿಕರನ್ನು ತೆಗಳಿದ್ದಾರೆ ಬದಲಾಗಿ ಅಂತರಂಗದ ಆಚರಣೆಯ ಮಹತ್ವವನ್ನು ವಿವರಿಸಿದ್ದಾರೆ.

''ಮನವ ಶೋಧಿಸಬೇಕು ನಿಚ್ಚ, ದಿನ
ದಿನದಿ ಮಾಡುವ ಪಾಪ ಪುಣ್ಯದ ವೆಚ್ಚ
ತನುವ ಖಂಡಿಸಿ ಒಮ್ಮೆ ಮಾಡೋ, ನಿನ್ನ
ಮನವ ದಂಡಿಸಿ ಪರಮಾತ್ಮನ್ನ ಕಾಣೋ
ಕೊನೆಗೆ ನಿನ್ನೊಳಗೆ ನೀ ಜಾಣೋ ಮುಕ್ತಿ
ನಿನಗೆ ದೂರಿಲ್ಲವು ಒಂದೇ ಗೇಣೋ

ಅರ್ಥವಿಲ್ಲದ ಆಚರಣೆಗಳಿಗಿಂತಲೂ ಶುದ್ಧಾಂತಃ ಕರಣದಿಂದ ಹುಟ್ಟುವ ಭಕ್ತಿಯು ಭಗವಂತನನ್ನು ತಲುಪುವುದು. ಅಂಥ ಭಕ್ತಿ ಭಾವ ಹುಟ್ಟಲು ನಾವು ಮಾಡುವ ಸಾಧನೆಯ ಮುಖ್ಯ ಎಂದು ಪುರಂದರ ದಾಸರು ಹೇಳಿದರು. ಒಳಗಣ್ಣಿನಿಂದ ಹರಿಯನ್ನು ಕಾಣಬೇಕು. ಆ ಒಳಗಣ್ಣು ತೊರೆಯಬೇಕಾದರೆ ಹೃದಯ ಪರಿಶುದ್ಧವಾಗಿರಬೇಕು. ಮನಸ್ಸು ಮಣಿಕರ್ಣಿಕೆಯಾಗಬೇಕು. ಆದ್ದರಿಂದಲೆ ಮನುಷ್ಯ ಎಷ್ಟೇ ವಿದ್ಯಾವಂತನಾಗಿದ್ದರೂ ಮನಸ್ಸು ನಿರ್ಮಲವಾಗಿಲ್ಲದಿದ್ದರೆ ಎಲ್ಲವೂ ವ್ಯರ್ಥ.

ಬೇವಿನ ಬೀಜ ಬಿತ್ತಿ ಬೆಲ್ಲದ
ಕಟ್ಟೆಯ ಕಟ್ಟೆ
ಜೇನು ಮಳೆಗೆರೆದರೆ ವಿಷ
ಹೋಗುವುದೇನಯ್ಯಾ?
ಏನು ಓದಿದರೇನು ಏನು ಕೇಳಿದರೇನು
ಮನದೊಳಗಿನ ತಾಮಸ ಬಿಡದನಕ

ವ್ಯಕ್ತಿಯ ಬದಕು ಸಂಸ್ಕಾರಗೊಂಡಾಗ ಆರೋಗ್ಯಕರವಾದ ಸಮಾಜವೂ ನಿರ್ಮಾಣವಾಗುತ್ತದೆ ಎಂಬುದನ್ನು ದಾಸರ ಈ ಮಾತುಗಳಿಂದ ತಿಳಿಯಬಹುದು ಅಸತ್ಯದಲ್ಲಿ ಆಚರಿಸುವ ಕರ್ಮಗಳೆಲ್ಲ ವ್ಯರ್ಥವೆಂದು ಹೇಳಿ ಸತ್ಯವೇ ಸ್ನಾನ, ಉಪವಾಸ, ಜಪ, ನೇಮ ಎಂದು ತಿಳಿಸಿದ್ದಾರೆ. ಆಚಾರವಿಲ್ಲದ ನಾಲಿಗೆಗೆ ತನ್ನ ನೀಚಬುದ್ಧಿಯ ಬಿಡುವಂತೆ ಹೇಳಿರುವ ಮಾತುಗಳು, ಧರ್ಮದ ಸ್ವರೂಪವನ್ನು ತಿಳಿಸುತ್ತ-ವಿಷವಿಕ್ಕಿದವನಿಗೆ ಷಡ್ರಸವನುಣಿಸಬೇಕು, ದ್ವೇಷಿಸುವವರನ್ನು ಪೋಷಿಸಬೇಕು, ನಿಂದಕರನ್ನು ವಂದಿಸಬೇಕು–ಇಂಥ ಸಾವಿರಾರು ನುಡಿಗಳು ಪುರಂದರದಾಸರು ಜಗತ್ತಿಗೆ ನೀಡಿರುವ ಸಾರ್ವತ್ರಿಕ ಸಂದೇಶಗಳಾಗಿವೆ.

ಪುರಂದರದಾಸರು ಮಾನವ ಬದುಕಿನ ಕ್ಷಣಿಕತೆಯನ್ನು ಹೇಳಿದ್ದರೂ "ಮಾನವ ಜನ್ಮ ದೊಡ್ಡದೋ ಅದರ ಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ... ಎಂದು ಹೇಳಿ ಅದರ ಹಿರಿಮೆಯನ್ನು ಹೇಳಿದ್ದಾರೆ. ಪುಣ್ಯದ ಫಲವಾಗಿ ದೊರೆತ ಮಾನವ ಜನ್ಮದಲ್ಲಿ ಕಾಲನ ಕರೆಗೆ ಮುಂಚಿತವಾಗಿ ಹರಿಸ್ಮರಣೆ ಮಾಡಿ ತ್ರಿಕರಣ ಶುದ್ಧಿಯನ್ನು ಸಾಧಿಸಿ

(34 ನೇ ಪುಟ ನೋಡಿ)

ಮುಕ್ತಿ ಪಡೆಯುವ ಮಾರ್ಗವನ್ನು ಪುರಂದರದಾಸರು ಹೀಗೆ ವಿವರಿಸಿದ್ದಾರೆ.

ಸುಮ್ಮನೆ ಬರುವುದೆ ಮುಕ್ತಿ
ನಮ್ಮ ಅಚ್ಯುತಾನಂದನ ನೆನೆಯದೆ || ಪ ||
ಮನದಲ್ಲಿ ದೃಢವಿರಬೇಕು
ಪಾಪಿ ಜನರ ಸಂಸರ್ಗವ ನೀಗಿ
ಅನುಮಾನವನು ಬಿಡಬೇಕು
ಕಾಮಕ್ರೋಧವ ಬಿಡಬೇಕು
ಪರಕಾಮಿನಿಯರ ಹಂಬಲ ಬಿಡಬೇಕು || ೧ ||
ಹೇಮದಾಸೆಯ ಸುಡಬೇಕು
ಹರಿನಾಮ ಸಂಕೀರ್ತನೆಯ ಮಾಡಬೇಕು
ಹರಿಯೆ ಗುರುವೆನ್ನಬೇಕು
ಶ್ರೀ ಹರಿಯ ಪರದೈವವೆಂತೆನ್ನಬೇಕು || ೨ ||
ಪರವಸ್ತು ಒಲ್ಲನೆನಬೇಕು
ದೇಹ ಸ್ಥಿರವಲ್ಲವೆಂತೆಂದು ತಿಳಿಯಲುಬೇಕು
ಸಾಪರಹಿತನಾಗಬೇಕು
ಜ್ಞಾನದೀಪದ ಬೆಳಕಲಿ ಓಡಾಡಬೇಕು || ೩ ||

ಈ ಒಂದು ಹಾಡಿನಲ್ಲಿ ಗೀತೆಯ ರಹಸ್ಯವನ್ನೆ ಅತ್ಯಂತ ಸರಳವಾಗಿ ಹೇಳಿ ಜನರ ಮನಸ್ಸನ್ನು ಮುಟ್ಟಿಸಿದ್ದಾರೆ. ಹೀಗೆ ನಡೆದುಕೊಳ್ಳದೆ ಕೇವಲ ಬಹಿರಾಡಂಬರದ ಮೂಲಕ ಭಕ್ತರ ಹಾಗೆ ಸೋಗು ಹಾಕುವವರನ್ನು ದಾಸರು ಕಟುವಾಗಿ ಟೀಕಿಸಿದ್ದಾರೆ.

తిరుమల తిరుపతి దేవస్థానములు

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.
* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷಿಸಿದಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2.4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ.ತಿ.ದೇ ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಪುರಂದರದಾಸರ ಕೃತಿಗಳಲ್ಲಿ
# ವಾತ್ಸಲ್ಯಭಾವ

'ವಾತ್ಸಲ್ಯ' ಎಂದರೆ ಚಿಕ್ಕಮಕ್ಕಳಲ್ಲಿ ಹಿರಿಯರು ತೋರುವ ಪ್ರೀತಿ ಎಂದರ್ಥ. ಅದರಲ್ಲೂ ತಾಯ್ತಂದೆಯರು ಮಕ್ಕಳನ್ನು ಪ್ರೀತಿಸಿ ಸಂತೋಷಿಸುವಂತೆ ಅನ್ಯರು ಆನಂದಿಸಲಾರರು. ಆದರೆ ಭಕ್ತರು ಭಗವಂತನಲ್ಲಿ ಭಕ್ತಿಯನ್ನು ಇದಕ್ಕೂ ಮಿಗಿಲಾದ ರೀತಿಯಲ್ಲಿ ತೋರುವರೆಂದು ಭಾರತೀಯ ಆಧ್ಯಾತ್ಮಿಕ ಗ್ರಂಥಗಳಲ್ಲಿ ಉಕ್ತವಾಗಿದೆ. ಅದರಲ್ಲಿಯೂ ಭಾಗವತ ಗ್ರಂಥದಲ್ಲಿ ಕೃಷ್ಣನ ಲೀಲಾವಿನೋದ ವರ್ಣನೆಯ ಭಾಗದಲ್ಲಿ ಯಶೋದೆ, ಗೋಪಾಲಕರು ಮತ್ತು ಗೋಪಿಯರು ವ್ಯಕ್ತಪಡಿಸಿರುವ ವಾತ್ಸಲ್ಯ ಕಥೆಗಳು ಭಕ್ತರಿಗೆ ಅಪರಿಮಿತ ಆನಂದ ನೀಯುವ ರಸದ ಮಡುವಾಗಿವೆ. ಅದುದರಿಂದ ಹರಿಭಕ್ತರಾದ ಹರಿದಾಸರು ಭಾಗವತೋಕ್ತ ಕೃಷ್ಣಕಥೆಯನ್ನು ನೆನೆದು ಆನಂದಪರವಶರಾಗುತ್ತಿದ್ದರು. ಪುರಂದರದಾಸರು ವ್ಯಾಸರಾಜರಿಂದ ಅಂಕಿತ ಪಡೆಯುವುದರೊಡನೆ ಭಗವದಪರೋಕ್ಷವನ್ನು ಹೊಂದಿದರು. ಆ ಭಗವಂತನನ್ನು ಧ್ಯಾನಿಸಿದಾಗ ಬಿಂಬದರ್ಶನವನ್ನು ಪಡೆಯುತ್ತಿದ್ದ ಅವರಿಗೆ ಪುನಃ ಪುನಃ ಆ ಸಕಲ ಸಲ್ಲಕ್ಷಣೋಪೇತ ಮೂರ್ತಿಯನ್ನು ನೋಡಬೇಕೆನಿಸುತ್ತಿತ್ತು. ಭಗವಂತನ ಚಿಂತನೆಯಲ್ಲಿ ಪುರಂದರದಾಸರು ಲಕ್ಷ್ಯ ಹರಿಸಿದಾಗ ಅವರ ಮನಃಪಟಲದ ಮೇಲೆ ಭಾಗವತಾಂತರ್ಗತ ಕಥೆಗಳು ಸುಳಿಯುತ್ತಿದ್ದವು. ಆಗ ಪುರಂದರದಾಸರು ಗೋಪಿಯಾಗಿ, ಗೋಪಾಲಕರಾಗಿ, ಯಶೋದೆಯಾಗಿ, ಕೃಷ್ಣನನ್ನು ಮಾತನಾಡಿಸಿ, ಝುಂಕಿಸಿ, ಸಮಾಧಾನ ಹೇಳಿ, ಹೆದರಿಸಿ, ಆಟವಾಡಿಸಿ, ಅವನ ತುಂಟಾಟಗಳಿಗೆ ರೋಸಿ ಹೋಗಿ, ಭಾವನಾಪರವಶರಾಗಿ ಮಾತನಾಡಿ ಆ ಮಾತುಗಳಿಗೆ ಕೃಷ್ಣನು ಏನು ಉತ್ತರ ಕೊಡಬಹುದೆಂಬುದನ್ನು ಕಲ್ಪಿಸಿಕೊಂಡು ಉತ್ತರಿಸಿ ಆನಂದಿಸಿರುವರು. ಕೃಷ್ಣನನ್ನು 'ಮಗನೆಂದಾಡಿಸುವ' ಭಾಗ್ಯ ಯಶೋದೆಗೆ ದೊರೆತ ಪ್ರಸಂಗವನ್ನು ದಾಸರು ಸ್ಮರಿಸಿ, 'ಅನಂತನಾಮವುಳ್ಳ ಭಗವಂತನಿಗೆ ಕೃಷ್ಣನೆಂದು ಹೆಸರಿಡುವ, ಭೋಗಿಶಯನನಾಗಿ ಯೋಗನಿದ್ರೆಯೊಳಿರುವವನನ್ನು ತೊಟ್ಟಿಲಲ್ಲಿ ಮಲಗಿಸಿ ಹಾಡುವ, ಚಿನ್ನದ ಮಣಿಯ ಮೇಲೆ ಕೂಡಿಸಿ ಹೊನ್ನು ತಾ ಗುಬ್ಬಿ ತಾ ಎಂದು ಆಟವಾಡಿಸುವ, ವೇದಾತೀತನಾದವನನ್ನು ಮಗನೆಂದು ಕರೆದು ವಿನೋದಿಸುವ, ಹದಿನಾಲ್ಕು ಲೋಕಗಳನ್ನು ಆಳುವ ಧೀರನು ಅಂಜಿದನೆಂದು ಭಾವಿಸಿ ರಕ್ಷೆ ಇಡುವ, ಯೋಗಿಗಳು ಜಪ-ತಪಗಳನ್ನು ಮಾಡಿಯೂ ಒಲಿಸಿಕೊಳ್ಳಲಾರದವನನ್ನು ಅಣಕವಾಡುವ, ಸರ್ವಗುಣ ಸಂಪನ್ನನಾದವನಿಗೆ ಹೆಜ್ಜೆಯನ್ನು ಇಡುವುದು ಹೀಗೆ ಎಂದು ಹೇಳಿ ಪುಟ್ಟ ಪುಟ್ಟ ಹೆಜ್ಜೆ ಇಡಿಸುವ, ಜಗದ್ವಂದ್ಯನನ್ನು ತೊಡೆಯ ಮೇಲೆ ಕೂಡಿಸಿ 'ಜಯಜಯವಾಗಲಿ' ಎನ್ನುವ ಪುಣ್ಯ ಯಶೋದೆಗಲ್ಲದೆ ಬೇರೆಯವರಿಗುಂಟೆ ಎಂದು ಪ್ರಶ್ನಿಸಿ ಈ ಪುಣ್ಯವನ್ನು ಆಕೆ ಹೇಗೆ ಸಂಪಾದಿಸಿದಳು ಎಂದು ವಿಸ್ಮಯ ಪಟ್ಟಿರುವರು.

ಯಾವ ತಾಯಿಗೆ ತಾನೆ ತನ್ನ ಮಗುವಿನ ಮೇಲೆ ವಾತ್ಸಲ್ಯವಿರುವುದಿಲ್ಲ? ಆದರಲ್ಲಿಯೂ ತಾಯಿ ಶ್ರೀಮಂತಳಾಗಿದ್ದರೆ ಆಕೆ ತನ್ನ ಮಗುವಿಗೆ ಎಷ್ಟು ಬಗೆಯಾದ ವಸ್ತ್ರಾಲಂಕಾರಗಳನ್ನು ತೊಡಿಸಿದರೂ ಆಕೆಗೆ ತೃಪ್ತಿ ದೊರೆಯದಿರಬಹುದು. ಯಶೋದೆ ಕೃಷ್ಣನನ್ನು ಹೇಗೆ ಅಲಂಕರಿಸಿ ಆನಂದಿಸಿರಬಹುದೆಂಬುದನ್ನು ದಾಸರು ಒಂದು ಕೀರ್ತನೆಯಲ್ಲಿ ವಿವರಿಸುತ್ತಾ ತಮ್ಮ ಕಾಲದ ಜನರ ನಂಬಿಕೆಗಳಿಗೆ ಕನ್ನಡಿ ಹಿಡಿದಿರುವರು.

> ಅರಳೆಲೆ ಮಾಗಾಯಿ ಬೆರಳಿಗುಂಗುರವಿಟ್ಟು
> ತರಳನ ಮೈಸಿರಿ ತರುಣಿ ನೋಡುತಿ ಹಿಗ್ಗಿ

-ದ್ದು ಒಮ್ಮೆಯಾದರೆ ಮತ್ತೊಮ್ಮೆ, "ಅಂಗಜಪಿತನಿಗೆ ಮೋಹದಿಂದ ಹೊಸ ಅಂಗಿಯ ತೊಡಿಸಿ, ಟೊಪ್ಪಿಗೆ ಇರಿಸಿ ಬಂಗಾರದರಳೆಲೆ ಬಿಂದುಲಿಗಳನಿಟ್ಟು ಸಿಂಗರವನು ಮಾಡಿ ನೋಡುತ್ತಾ, ದೃಷ್ಟಿ ತಾಗೀತೆಂದು......ತಟ್ಟೆಯೊಳಾರತಿಗಳ ಬೆಳಗಿ ಥಟ್ಟನೆ ಉಪ್ಪು ಬೇವುಗಳ ನಿವಾಳಿಸಿ ತೊಟ್ಟಿಲೊಳಿಟ್ಟು ಮುದ್ದಾಡುವಳಂತೆ!

ಯಶೋದೆ ತೋರಿದ ವಾತ್ಸಲ್ಯದ ಪರಿ ಒಂದು ಬಗೆಯಾದರೆ ಗೋಕುಲದ ಗೋಪಿಯರು ವಾತ್ಸಲ್ಯಾತಿರೇಕದಿಂದ ಕೃಷ್ಣನ ನಾನಾ ಚೇಷ್ಟೆಗಳನ್ನು ಸಾವಧಾನದಿಂದ ಸ್ಮರಿಸುವ ನೀತಿಯನ್ನು ಪುರಂದರದಾಸರು ಮನಮುಟ್ಟುವಂತೆ ಚಿತ್ರಿಸಿರುವರು. ಗೋಪಿಯರ ಮನೆಗೆ ನುಗ್ಗಿ ಹಾಲು, ಬೆಣ್ಣೆ, ಮೊಸರುಗಳನ್ನು ಕದ್ದು ಮೆದ್ದು, ತೊಟ್ಟಿಲಲ್ಲಿ ಮಲಗಿರುವ ಮಕ್ಕಳನ್ನು ಚಿವುಟಿಬ್ಬಿಸಿ ಚೇಷ್ಟೆಗೈಯುವ ಕೃಷ್ಣನಲ್ಲಿ ಅವರಿಗೆ ದ್ವೇಷವಾಗಲೀ, ಸೇಡು ತೀರಿಸಿಕೊಳ್ಳುವ ಮನೋಭಾವವಾಗಲಿ ಉಂಟಾಗಲಿಲ್ಲವಂತೆ!

> ಎಲೆ ಎಲೆ ಮಿಂಚೆ ಗರ್ಜಿಸದಿರಿ ನೀವು
> ಎಲೆ ಎಲೆ ಮೇಘರಾಜಾ ಮಳೆಗರೆಯದಿರು
> ಎಲೆ ಎಲೆ ಭೂದೇವಿ, ನವರತುನಗಳಿಂದ
> ನೆಲೆ ಕಟ್ಟಿಕೊಂಡು ಥಳಥಳಿಸುತಿರು

**ಡಾ॥ ಕೆ. ಗೋಕುಲನಾಥ್**

> ಹುಲಿಯುಗುರು ಅರಳೆಲೆ ಮಾಗಾಯಿ ಕಂಕಣ
> ಘಲು ಘಲುಕೆಂಬ ಕಾಲ ಪೆಂಡೆಯನಿಟ್ಟು
> ಬಲರಾಮ ಪುರಂದರವಿಠಲ ಗೋಪಾಲ ಕೃಷ್ಣ
> ನಲಿಯುತ ಅಂಬೆಗಾಲನಿಕ್ಕುತ ಬರುತಾರೆ

ಹೀಗೆ ಪ್ರಕೃತಿಯು ಅಂಬೆಗಾಲಿಡುವ ಕೃಷ್ಣನಿಗೆ ಭಯವಾಗದಂತೆ ನಡೆದುಕೊಳ್ಳಬೇಕೆಂದು ಪ್ರಾರ್ಥಿಸಿರುವ ಗೋಪಿಯರ ವಾತ್ಸಲ್ಯ ಅಪಾರ;

ಒಮ್ಮೆ ಬಾಲಕೃಷ್ಣ ಸದ್ದುಮಾಡದೆ ಗೋಪಿಯೊಬ್ಬಳ ಹಿಂದೆ ಬಂದು, ಆಕೆಯ ಎರಡು ಕಣ್ಣುಗಳನ್ನೂ ತನ್ನ ಕೈಗಳಿಂದ ಮುಚ್ಚಿದನಂತೆ! ಆಗ ಆಕೆಗೆ ಅದು ಕೃಷ್ಣನ ಕೆಲಸವೆಂದೇ ಭಾಸವಾಯಿತು. ಆಗ ಕೃಷ್ಣನ ಮನಸ್ಸು ಮೀಟುವಂತೆ ಆಕೆಯಾಡಿದ ಮಾತುಗಳು ಹೀಗಿದೆ;

> ನೀನಾರವ ಪೇಳೆನ್ನ ಕಣ್ಣ ಮುಚ್ಚುವೆ
> ಮೌನಗೊಂಡರಿಯದಂತಿಪ್ಪ ಮಗುವೆ ॥ ಪ ॥
>
> ಅತಿ ಚೆಲುವಿಗೆ ರತಿಪತಿಸನೋ – ನೀ
> ಶ್ರುತಿ ಸಕಲಾನ್ವಯ ಸನ್ನುತನೊ
> ಚತುರ್ದಶ ಭುವನವನಾಳಿದನೊ – ನೀ
> ಶತಶಪ್ಪುಗಳೆಣಿಸಿದವನೊ ॥ ೧ ॥

ಈ ಕೀರ್ತನೆಯಲ್ಲಿ ಶಿಶುಪಾಲನನ್ನು ಸಂಹರಿಸಿದ ಕಥೆಯನ್ನು ಜ್ಞಾಪಿಸಿರುವ ಪರಿ ಕೊನೆಯ ಸಾಲಿ



ನಲ್ಲಿ ಹೃದಯ ಸ್ಪರ್ಶಿಯಾಗಿರುವುದರೊಡನೆ, ಅನ್ಯರ ತಪ್ಪುಗಳೆಣಿಸುವ ನೀನು ನನ್ನ ಕಣ್ಣನ್ನು ಹೀಗೆ ಮುಚ್ಚಿರುವುದು ತಪ್ಪಲ್ಲವೆ ? ಎಂಬರ್ಥವೂ, ಅಂತರ್ಯಾಮಿ ಆತ್ಮಾಂತರ್ಗತ ಬಿಂಬಮೂರ್ತಿಯ ದರ್ಶನವಾಗದಂತೆ ಅಜ್ಞಾನದ ಪೊರೆಯನ್ನು ಇನ್ನೂ ಮುಚ್ಚಿಟ್ಟು ಅಂಧಕಾರವನ್ನುಂಟುಮಾಡಿ, ಸ್ವಸ್ವರೂಪಭೂತ ಜ್ಞಾನಾನಂದವನ್ನು ನೀಡದೆ ಇರುವುದು ಸರಿಯೆ ಎಂಬ ಪ್ರಶ್ನಾರ್ಥಕ ಪ್ರಾರ್ಥನೆಯೂ ದಾಸವಾಣಿಯಲ್ಲಿ ಅಡಗಿರುವಂತಿದೆ !

ಮಕ್ಕಳ ಮೇಲೆ ವಾತ್ಸಲ್ಯವಿರುವವರಿಗೆ ಮಕ್ಕಳನ್ನು ನೋಡಿದಾಕ್ಷಣ ಅದರ ಕೈಗೆ ಏನಾದರೂ ಕೊಟ್ಟು ಸಂತೋಷ ಪಡಿಸೋಣವೆನಿಸುತ್ತದೆ. ಆದರೆ ಕೆಲವು ಮಕ್ಕಳು ಅನ್ಯರು ಕೊಟ್ಟದ್ದನ್ನು ಪಡೆಯಲು ಕೈಚಾಚುವುದಿಲ್ಲ; ಆಗ ಆ ಮಕ್ಕಳನ್ನು ಉಪಚರಿಸಿ, ಕೈಚಾಚಿಸಿ ಅಥವಾ ಕೈಯಲ್ಲಿ ವಸ್ತುವನ್ನು ತುರುಕಿ ಆನಂದಪಡುತ್ತಾರೆ. ಗೋಪಿಯೊಬ್ಬಳು ಕೃಷ್ಣನ ಕೈಗೆ ಬೆಣ್ಣೆ ಕೊಡಲು ಹವಣಿಸುತ್ತಾ, ಭಗವಂತನು ನಾನಾ ಅವತಾರಗಳಲ್ಲಿ ಕೈಯಿಂದ ಮಾಡಿದ ಕೆಲಸಗಳನ್ನು ಜ್ಞಾಪಿಸುತ್ತಾ 'ಕೈಯ ತೋರೋ ಕರುಣೆಗಳರಸಾ ಕೈಯ ತೋರೋ ಕೈಯಲಿ ಬೆಣ್ಣೆಯ ಮುದ್ದೆಯ ನೀಡುವೆ' ಎಂದು ಹಾಡಿದಳಂತೆ. ಭಗವಂತನ ಕಾರುಣ್ಯ, ಧೈರ್ಯ, ಶೌರ್ಯ, ಔದಾರ್ಯ ಗುಣಗಳ ವರ್ಣನೆ ಈ ಕೀರ್ತನೆಯಲ್ಲಿರುವುದರೊಡನೆ ಪ್ರತಿ ಸಾರಿನ ಕೊನೆಯಲ್ಲಿ 'ಕೈಯ ತೋರೋ' ಎಂಬ ಶಬ್ದ ಸಾಮೂಹಿಕ ಭಜನೆಯಲ್ಲಿ ಭಕ್ತರ ಆನಂದವನ್ನು ನೂರ್ಮಡಿಸುವಂತಹ ಶಕ್ತಿಯನ್ನು ಪಡೆದಿದೆ ಎನಿಸುತ್ತದೆ. ಭಕ್ತನ ಆತ್ಮ ಪ್ರಾರ್ಥನೆ ಇಲ್ಲಿ ಮನಮುಟ್ಟುವಂತಿದೆ.

ಮಕ್ಕಳ ಮುಗ್ಧ ಪ್ರಶ್ನೆ ಹಾಗೂ ಬೇಡಿಕೆಗಳನ್ನು ಕೇಳಿದಾಗೂ ವಿಲಕ್ಷಣವಾದ ಆನಂದವಾಗುತ್ತದೆ. ಜಾಣ್ಮೆಯ ಪ್ರಶ್ನೆಗಳನ್ನು ಕೇಳಿದಾಗ, ಹಿರಿಯರು ನಿರುತ್ತರರಾಗಬೇಕಾದ ಸಂದರ್ಭ ಒದಗಿದರೂ ಆ ಮಕ್ಕಳ ಬೌದ್ಧಿಕಶಕ್ತಿಗೆ ಹೆಚ್ಚುವಂತಾಗುವುದು ಸಾಮಾನ್ಯ ಸಂಗತಿ. ಗೋಪಿಯರು ಕೃಷ್ಣನು ಈ ಬಗೆಯ ಜಾಣ್ಮೆಯ ಪ್ರಶ್ನೆಗಳನ್ನೆಸೆದಾಗ ಸ್ನೇಹಿತೆಯರ ಮತ್ತು ಯಶೋದೆಯ ಮುಂದೆ ಪುನಃ ಹೇಳಿ ಆನಂದಿಸಿದ ಪರಿಯನ್ನು ಪುರಂದರದಾಸರು ತಿಳಿಸಿರುವರು. 'ಚಂದ್ರನನ್ನು ನೋಡಿ ಕೈಗೆಟುಕಲಿಲ್ಲವೆಂದು ಕೃಷ್ಣ ಒಮ್ಮೆ ಹಟಮಾಡಿದರೆ ಮತ್ತೊಮ್ಮೆ ಗೋಡೆಯ ಮೇಲೆ ಬರೆದ ಚಿತ್ರಗಳನ್ನು ತಂದು ತನ್ನ ಪಕ್ಕದಲ್ಲಿಡಿರೆಂದು ಪಟ್ಟು ಹಿಡಿದನಂತೆ ! ತನ್ನ ಪ್ರತಿಬಿಂಬವನ್ನು ತಂದು ಪಕ್ಕದಲ್ಲಿಡಿ ಎಂದು ಅಜ್ಞೆ ಮಾಡಿದನಂತೆ !

ಹೊರಗೆ ಆಟವಾಡಲು ಹೋದ ಕೃಷ್ಣ ಕೆಲವು ದಿನ ಒಡನಾಡಿಗಳು ರೇಗಿಸಿದರೆಂದು ದೂರುತ್ತಾ ಮನೆಗೆ ಬರುತ್ತಿದ್ದನಂತೆ ! ಮಕ್ಕಳ ದೈನಂದಿಕ ಚರ್ಯೆಯನ್ನು ಪುರಂದರದಾಸರು ಕೃಷ್ಣನ ಮೂಲಕ ಹೇಳಿಸಿರುವುದರೊಡನೆ, ಸತ್ಯವಾದ, ಆದರೆ ಮಗುವಾದ ಕೃಷ್ಣನಿಗೆ ತಿಳಿಯದೆ ಇರುವ ಕೆಲವು ಘಟನೆಗಳ ಪ್ರಸ್ತಾಪ ಈ ಕೀರ್ತನೆಯಲ್ಲಿದ್ದು ದಾಸರ ಶೈಲಿಯ ಕಾರಣದಿಂದ ಹೃದಯವನ್ನು ತಟ್ಟುತ್ತದೆ. ಗೆಳೆಯರು ಕಣ್ಣನ್ನು ಮಿಟುಕಿಸಿ ಹೇಗೆ ಆಡಿಕೊಳ್ಳುತ್ತಿದ್ದರೆಂಬ ದೂರನ್ನು ಕೃಷ್ಣ ಇಲ್ಲಿ ಸಲ್ಲಿಸಿರುವ ಪರಿಯಂತೂ ತುಂಬ ಸಹಜವಾಗಿದೆ.

ಆಡ ಹೋದಲ್ಲಿ ಮಕ್ಕಳು ಎನ್ನನು
ಆಡಿಕೊಂಬರು ನೋಡಮ್ಮ ॥ ಪ ॥

ನೋಡಿ ನೋಡಿ ಇತ್ತ ಮುಖವ
ಮಾಡಿ ಕಣ್ಣ ಮೀಟುವರಮ್ಮ ॥ ಅ.ಪ. ॥

ದೇವಕಿ ಪೆತ್ತಳಂತೆ ವಸು
ದೇವನೆಂಬುವ ಪಿತನಂತೆ
ಕಾವಲಿನೊಳು ಪುಟ್ಟಿದೆನಂತೆ
ಮಾವ ಕಂಸಗಂಜಿ ಬಂದೆನಂತೆ ॥ ೧ ॥

ನೀನೆನ್ನ ಪೆತ್ತಿಲ್ಲವಂತೆ–ಅಮ್ಮಾ
ನಾ ನಿನ್ನ ಮಗನಲ್ಲವಂತೆ
ಧೇನು ಕಾಯುವರಿಲ್ಲವೆಂದು ನೀನು
ಸಾನುರಾಗದಿ ಸಲಹಿದೆಯಂತೆ ॥ ೨ ॥

ಈ ರೀತಿ ಮನೆಯ ಹೊರಗೆ ಒಡನಾಡಿಗಳ ಕಾಟವನ್ನನುಭವಿಸಿದಾಗ 'ಪೋಗದಿರೆಲೊ ರಂಗ–ಬಾಗಿಲಿಂದಾಚೆಗೆ' ಎಂದು ಯಶೋದೆ ಕೃಷ್ಣನಿಗೆ ಹೇಳಿದರೆ, ಅವನು ಹೇಳಿದ ಮಾತನ್ನು ಕೇಳುವ ಮಗನೆ ? ಹಾಗೆಂದು ಕೃಷ್ಣನನ್ನು ಯಾವಾಗಲೂ ಮನೆಯ ಹೊರಗೆ ಬಿಟ್ಟಿರುವುದು ಸಾಧ್ಯವೆ ? ಕೃಷ್ಣ ಮನೆಯಲ್ಲಿರಲಿ; ಆನಂದವಾರಿಧಿಯಲ್ಲಿ ಈಜಾಡುವ ಭಾಗ್ಯ ನನ್ನದಾಗಲಿ; ಎಂದು ಯಶೋದೆ "ಮನೆಯ ಹೊರಗೆ ಹೋದರೆ ಸುರಮುನಿಗಳೋ, ಜಗದ ನಾರಿಯರೋ ಹಿಡಿದಿಟ್ಟುಕೊಳ್ಳುವರು" ಎಂದು ಕೃಷ್ಣನಿಗೆ ಯಶೋದೆ ಹೆದರಿಸುತ್ತಾಳೆ. ಈ ಕೀರ್ತನೆಯಲ್ಲಿ ತತ್ತ್ವ, ತರ್ಕ, ಶಬ್ದಾರ್ಥ ಸಾಮರಸ್ಯ, ಮಿನುಗಿ ನಾದ ಮಾಧುರ್ಯ ತುಂಬಿಕೊಂಡಿದೆ. ಪುರಂದರದಾಸರ ಭಕ್ತಿ ಇಲ್ಲಿ ಯಶೋದೆಯ ವಾತ್ಸಲ್ಯವಾಹಿನಿಯಾಗಿ ಹರಿದಿದೆ ಎನಿಸುತ್ತದೆ.

ಆದರೆ ಕೃಷ್ಣ ಯಾರ ಮಾತಿನ ಕಟ್ಟಿಗೂ ಸಿಗುವವನಲ್ಲ, ಬೆಳಗಾದರೆ ಸಾಕು; ಎಲ್ಲಿ ಬೆಣ್ಣೆಯ ಬಿಚ್ಚಿಡುವೆ ನಾ ಈ ಕಳ್ಳ ಕೃಷ್ಣನ ಹಾವಳಿ ಘನವಾಯಿತು–ಎಂದು ಗೋಪಿಯರು ಚಿಂತಿಸುವ ಸ್ಥಿತಿಗೊಳಗಾಗುವರು ! ಮಕ್ಕಳಿಗೆ ಸುಲಭವಾಗಿ ಸಿಗದಂತೆ ನೆಲುವಿನಲ್ಲಿಟ್ಟರೆ ಸಮಸ್ಯೆ ಬಗೆ ಹ... ದೀತೆ ? ಬ್ರಹ್ಮಾಂಡವನ್ನೇ ವ್ಯಾಪಿಸಿಕೊಳ್ಳುವಂ... ಬೆಳೆಯಬಲ್ಲವನಿಗೆ ನೆಲುವಿನದೇನು ಲೆಕ್ಕ ? ಕತ್ತ... ನಲ್ಲಿಟ್ಟರೇನು! ಅವನ ಕಣ್ಣಿನಲ್ಲಿ ಸೂರ್ಯಚಂದ್ರರ... ಇರುವರು, ಇಂದ್ರಾದಿ ದೇವತೆಗಳಿಗೆ ದೂರಿ ಶಿಕ್ಷಿ... ಸೋಣವೆಂದರೆ ಅವರೆಲ್ಲ ಇವನ ಸೇವಕರೇ ! ಈಗಲೆ ಹೀಗಾದರೆ ಮುಂದೇನು ಗತಿ ಎಂದು ಅವರು ಚಿಂತೆಗೀಡಾದರೇ ವಿನಃ ಕ್ರೋಧವಶರಾ... ಲಿಲ್ಲ. ಏಕೆಂದರೆ ಅವರಿಗೆ ಕೃಷ್ಣನಲ್ಲಿ ಅಷ್ಟೊಂದು ವಾತ್ಸಲ್ಯವಿತ್ತು

'ಕೂಗದೆ ಉಸುರಿಕ್ಕದೆ ನೀವು ಮನೆಗೆ ಬನ್ನಿ ರಂಗ ಮನೆಯ ಪೊಕ್ಕ' ಎಂದು ಗೆಳತಿಗೆ ಗೋಪಿಯೊಬ್ಬಳು ಹೇಳುತ್ತಾ ತನ್ನ ಮನೆಯೊಳಗೆ ಸರಿದಾಗ ಮನೆಯಲ್ಲಿ ಹಾಲಿನ ಹೊಳೆ ಹರಿದಿತ್ತು ! ಮಜ್ಜಿಗೆಯಲ್ಲಿ ಮನೆಯೊಳಗೆ ಓಕುಳಿಯಾಡಿರುವ... ರೇನೊ ಎಂದು ಭಾವಿಸುವಂತೆ ಮನೆಯೆಲ್ಲಾ ಮೊಸರು–ಮಜ್ಜಿಗೆ ಮಯವಾಗಿತ್ತು ! ಆದರೆ ಕೃಷ್ಣ ಆ ಹೊತ್ತಿಗೆ ಹಿತ್ತಿಲ ಗೋಡೆಯೇರಿ ಪಕ್ಕದ ಮನೆಯೊಳಿಳಿದು ತನ್ನ ಪರಿವಾರವನ್ನು ಸಾಲಾಗಿ ಕೂಡಿಸಿ ಹಾಲು ಮೊಸರು, ಬೆಣ್ಣೆಯನ್ನು ಧಾರಾಳವಾಗಿ ಹಂಚಿ ಉಳಿದುದನ್ನು ಚೆಲ್ಲಿ ಅದರ ಮೇಲೆ ಹೆಜ್ಜೆಗಳಿಟ್ಟು ಮುಂದಿನ ಮನೆಗೆ ಹೊರಡಲು ಸಿದ್ಧನಾಗಿದ್ದನಂತೆ. ಆ ಗೋಪಿಗೆ ಕೃಷ್ಣನ ಕಾಲ್ಗೆಜ್ಜೆಯ ಧ್ವನಿ ಕೇಳಿತೇ ವಿನಾ ಅವನ ದರ್ಶನ ಲಾಭವಾಗಲಿಲ್ಲ. ಆದರೆ ಆಕೆಯೂ ಹಠವಾಡಿ ಕೃಷ್ಣನನ್ನು ಹಿಡಿಯಲೇ ಬೇಕೆಂದು ಪಣ ತೊಟ್ಟು ಬೀದಿಯ ಮನೆಮನೆಗೆ ನುಗ್ಗಿ ಹುಡುಕಿದಾಗ ಒಂದು ಕಡೆ ಕೃಷ್ಣನ ದರ್ಶನವಾಯಿತು. ಅವನನ್ನು ಹಿಡಿದು ಗದರಿಸಲೆಂದು ಹತ್ತಿರಬರುವ ಹೊತ್ತಿಗೆ ಕೃಷ್ಣನು ಆಕೆಯ ಮಕ್ಕಳನ್ನು ಹಿಡಿದು ಮರಕ್ಕೆ ಕಟ್ಟಿ ಹಾಕಿದ ದೃಶ್ಯ ಗೋಚರವಾಯಿತು ! ಆಗ ಆ ಗೋಪಿ ತನ್ನ ಮಕ್ಕಳನ್ನು ಬಿಡಿಸಿಕೊಳ್ಳಲು ಧಾವಿಸಿದಾಗ ಕೃಷ್ಣ ಪಲಾಯನ ಮಾಡಿದನಂತೆ !

ಮತ್ತೊಂದು ಮನೆಯಲ್ಲಿ ದೇವರ ಪೆಟ್ಟಿಗೆಯನ್ನು ತೆಗೆದು ಸಾಲಿಗ್ರಾಮಾದಿಗಳನ್ನು ಪೂಜೆಗೆಂದು ಅಣಿಗೊಳಿಸಿರುವಾಗ ಕೃಷ್ಣ ನುಗ್ಗಿ ಅಭಿಷೇಕದ ನೀರನ್ನು ಕುಡಿದು, ನೈವೇದ್ಯವನ್ನು ತಿಂದು, ತುಂಟತನದ ಪರಮಾವಧಿಯನ್ನೆಸಗಿದಾಗ ಗೋಪ–ಗೋಪಿಯರು ಮುಂದಿಟ್ಟ ಪ್ರಶ್ನೆಗಳಿಗೆ ಕೊಟ್ಟ ಉತ್ತರದಲ್ಲಿ ಸಿದ್ಧಾಂತಸಾರವೇ ಅಡಕವಾಗಿರುವುದು :

ಸೈರಿಸಲಾರೆನೆ ಗೋಪಿ ನಿನ್ನ ಮಗನ ಲೂಟಿ
ಏಸೆಂದು ಪೇಳಲಮ್ಮ ॥ ಪ ॥

ದೇವರ ಪೆಟ್ಟಿಗೆ ತೆಗೆದು ಸಾಲಿಗ್ರಾಮ
ಸಾವಿರ ನುಂಗುವನೇ

ಭಾವಜನಯ್ಯ ಇದೇನೆಂದರೆ ನಿಮ್ಮ
ಕಾವ ದೇವರು ನಾನು ಕೇಳಿಕೊ ಎಂಬನೆ
॥ ೧ ॥

ಅಗ್ರೋದಕ ತಂದು ಜಗುಲಿ ಮೇಲಿಟ್ಟರೆ
ವೆಗ್ಗಳದಲಿ ಕುಡಿವ
ಮಂಗಳಮಹಿಮನ ಮೀಸಲೆಂದರೆ ನಿಮ್ಮ
ಮಂಗಳ ಮಹಿಮನ ಅಪ್ಪ ನಾನೆಂಬುವ ॥ ೨ ॥

ಅಟ್ಟಡಿಗೆಯನೆಲ್ಲ ಉಚ್ಛಿಷ್ಟವ ಮಾಡಿ
ಅಷ್ಟು ತಾ ಬಳಿದುಂಬನೆ
ಇಷ್ಟ ವಿಷ್ಣು ದೇವರ ನೈವೇದ್ಯವೆಂದರೆ ನಿಮ್ಮ
ಇಷ್ಟದೇವರು ತೃಪ್ತನಾದನೆಂತೆಂಬುವ ॥ ೩ ॥

ಕೃಷ್ಣನ ಈ ಲೂಟಿಗೆ ಕೊನೆ ಮೊದಲಿಲ್ಲ. ದಿನಕ್ಕೆ ನೂರು, ಹೊತ್ತಿಗೆ ಹತ್ತು ಬಗೆಯ ಹೊಸ ಚೇಷ್ಟೆಗಳನ್ನು ಮಾಡುತ್ತಿದ್ದನು, ಮಕ್ಕಳ ಕೈಲಿದ್ದ ತಿಂಡಿ–ಬೆಣ್ಣೆ ಕೃಷ್ಣನ ಪಾಲಾಗುತ್ತಿತ್ತು, ಆಗ ಆ ಮಕ್ಕಳ ರೋದನ ತಡೆರಹಿತವಾಗುತ್ತಿತ್ತು; ಮೊಸರ ಮಡಕೆಯಲ್ಲಿ ಮಾರಿಯೇ ಹೊಕ್ಕಂತಾಗುತ್ತಿತ್ತು, ಗೋಪಿಯರು ಮನೆಯೊಳಗಿರುವಾಗ ಕೃಷ್ಣನ ಒಂದು ಬಗೆಯ ಕಾಟವಾದರೆ, ಹೊರಗೆ ಹೋದಾಗ ಮತ್ತೊಂದು ಬಗೆಯ ಕಾಟವನ್ನೆದುರಿಸ ಬೇಕಾಗುತ್ತಿತ್ತು. 'ನಿನ್ನ ಮಗನ ಲೂಟಿ ಘನವಮ್ಮ ಕರೆದು ಚಿಣ್ಣಗೆ ಬುದ್ಧಿಯ ಹೇಳೆ ಗೋಪಮ್ಮ' ಎಂದು ಈ ಗೋಪಿಯರು ಯಶೋದೆಗೆ ದೂರಿತ್ತು, 'ಪುರಂದರ ವಿಠಲನ ಕೇರಿಯ ಬಸವನ ಮಾಡಿ ಬಿಟ್ಟೆ' ಎಂದು ಯಶೋದೆಯನ್ನು ಆಕ್ಷೇಪಿಸುತ್ತಾರೆಯೇ ವಿನಾ ಯಾವ ಗೋಪಿಯರೂ ಯಾವ ಸಂದರ್ಭದಲ್ಲಿಯೂ ಕೃಷ್ಣನ ಮೇಲೆ ಕೈ ಮಾಡಿದ ಅಥವಾ ಬೈದ ಪ್ರಸಂಗಗಳು ದೊರೆಯುವುದಿಲ್ಲ, ಕೃಷ್ಣನ ಚೇಷ್ಟೆಗಳಲ್ಲಿ ಅವನ ಜಾಣ್ಮೆಯನ್ನು ಗುರುತಿಸಿ ಅವರು ಆನಂದ ಪಡುವುದು ಅವರ ಸ್ವಭಾವವಾಗಿದ್ದುದರಿಂದಲೇ ಈ ತುಂಟತನಗಳಿಂದ ಅವರಿಗೆ ಕೃಷ್ಣನಲ್ಲಿ ವಾತ್ಸಲ್ಯ ಅಧಿಕಗೊಂಡಿತು. ಈ ರೀತಿಯಾಗಿ ಕೃಷ್ಣ ಗೋಪಿಯರಿಗೆ ಕಾಟ ಕೊಟ್ಟಾಗ ಗೋಪಿಯರು ಯಶೋದೆಯನ್ನು ರೇಗಿಸುತ್ತಿದ್ದರೇ ವಿನಾ ಕೃಷ್ಣನ ಮೇಲೆ ಕೈ ಎತ್ತಲಾರರು.

ಕಳವು ಕಲಿಸಿದೆಯಮ್ಮ ಗೋಪಿ
ಕಮಲನಾಭಗೆ
ಉಳಿಸಿಕೊಂಡೆಯ ನಿಮ್ಮ ಮನೆಯ ಪಾಲು
ಬೆಣ್ಣೆಯ ॥

ಆರೂ ಏಳದ ಮುನ್ನ ಎಬ್ಬಿಸಿ ಶೃಂಗಾರ ಮಾಡಿ
ಗೀರುಗಂಧವ ಹಚ್ಚಿ ಹಾರವ ಹಾಕಿ
ಕೇರಿ ಕೇರಿ ಪಾಲು ಬೆಣ್ಣೆ ಸೂರೆ ಮಾಡಿ
ಬಾರೆನ್ನುತ
ವಾರಿಜನಾಭನ ಕಳುಹಿದೆ ವನಜನಯನನ
॥ ೧ ॥

ವಾರಿಜಾಕ್ಷ ಮಾಡಿದಂಥ ದೂರು ಹೇಳಿದರೆ
ನಿಮಗೆ
ದೂರುಬಡಕರೆಂದು ಗೋಪ ಬಯ್ವ ನಮ್ಮನು
ಊರು ಮಾಡಿದ ಕೊಳಕು ತಾಯಿ ಮಾಡಿದ
ಹೊಟ್ಟೆ
ವಾರಿಜನಾಭನ ಕರೆದು ಬುದ್ಧಿಯ ಹೇಳೆ ॥ ೨ ॥

ಹೊಟ್ಟೆ ಬಾಕನಿವ ಬೆಟ್ಟದೊಡೆಯಗೆ ಪ್ರಿಯ
ಇಟ್ಟುಕೊಂಡೀರೇಳು ಭುವನ ಉದರದಲ್ಲಿಯೆ
ಎಷ್ಟು ಹೇಳಿದರೂ ಕೇಳ ಏನು ಮಾಡಲಮ್ಮ
ನಾನು
ಕಟ್ಟು ಮಾಡಿಸಲು ಬೇಕು ಪುರಂದರವಿಠಲಗೆ
॥ ೩ ॥

ಯಶೋದೆಯ ಎದುರು ಕೃಷ್ಣನನ್ನು ಗೋಪಿಯರು ನಾನಾ ಪರಿಯಾಗಿ ನಿಂದಿಸುವರು, "ಮಗನ ಊರ ಗೂಳಿಯ ಮಾಡಿದೇನೆ ? ಬುದ್ಧಿಯ ಹೇಳಬಾರದೆ?" ಎಂದು ಒಮ್ಮೆ ಪಶ್ನಿಸಿದರೆ ಮತ್ತೊಮ್ಮೆ, "ಗೋಕುಲದೊಳಗಿರಲಾರೆವಮ್ಮ ಗೋಪಮ್ಮ","ನಿನ್ನ ಮಗನಿಗಾಗಿ ಕೇರಿಯ ಬಿಟ್ಟು ಪೋಪೆವು ಬೆಳಗಾಗ" ಎನ್ನುತ್ತಾರೆ. ಆದರೆ ಎಷ್ಟು ದಿನಗಳು ತಾನೆ ಊರು–ಕೇರಿ ಬಿಟ್ಟು ಹೋಗಲು ಸಾಧ್ಯ! 'ನಿನ್ನ ಮಗನ ಮುದ್ದು ನಿನಗಾದರೆ ಗೋಪಿ ಆರಿಗೇನೆ?' ಎಂದು ಝಂಕಿಸಿ ನುಡಿದು 'ನಿನ್ನ ಮಗನಂತಹರೆಲ್ಲಿಲ್ಲವೆ, ಹೊಂತಕಾರಿ ಬಲವಂತರಿಗಧಿಕನು–ಕಾಡುವ ಕೃಷ್ಣಗೆ ಕರೆದು ಬುದ್ಧಿಯ ಹೇಳೆ' ಎಂದು ಪರಿಪರಿಯಾಗಿ ನುಡಿದರೂ, ಗೋಪಿಯರೂ ಕೃಷ್ಣನನ್ನು ಮುದ್ದಿಸದಿರಲಾರರು.

ಈ ಆರೋಪಣೆಗಳನ್ನಾಲಿಸಿದ ಯಶೋದೆ ಕೃಷ್ಣನನ್ನು ಶಿಕ್ಷಿಸಲು ಎಂದೂ ಮುಂದುವರಿಯಲಿಲ್ಲ; ಗೋಪಿಯರಿಗೆ ಅಷ್ಟು ವಾತ್ಸಲ್ಯವಿದ್ದ ಮೇಲೆ ಯಶೋದೆಯ ಪುತ್ರವಾತ್ಸಲ್ಯವೇನು ಕಡಿಮೆಯೇ! ಬಾಲಕೃಷ್ಣ ಶ್ರೀಹರಿಯ ಅವತಾರಿಯಾದುದರಿಂದ ಅವನು ಜಗದ್ರಕ್ಷಕನೇ ವಿನಾ ಜಗದ ಭಕ್ಷಕನಲ್ಲ; ಬಾಯಲ್ಲಿ ಬೆಟ್ಟಿಟ್ಟರೆ ಕಚ್ಚಬೇಕೆಂದು ತಿಳಿಯದ ಮುಗ್ಧ ಶಿಶು ಕೃಷ್ಣ; ಇಂತಹವನ ಮೇಲೆ 'ದೂರು ಮಾಡುವರೇನೆ ರಂಗಯ್ಯನ' ಎಂದು ಪ್ರತಿಯಾಗಿ ಪ್ರಶ್ನಿಸುವಳು.

ದೂರು ಮಾಡುವರೇನೆ ಚೋರನೆಂದಿವನನ್ನು
ಮೂರು ಲೋಕವನು ಕಾಪಾಡುವ
ರಂಗಯ್ಯನ ॥ ೧ ॥
ನಂದಗೋಕುಲದಲ್ಲಿ ಕಂದರೊಡಗೂಡಿ ಆ
ನಂದದಿಂದಲಾಡುವ ಕಂದ ರಂಗಯ್ಯನ ॥ ೨ ॥

* * * *

ಸಾಕು ಮಾಡಿರವ್ವ ರಂಗನ ಏಕೆ ದೂರುವಿರಿ
॥ ಪ ॥

ಬೆಟ್ಟು ಬಾಯೊಳಿಟ್ಟರೆ ರಂಗ ಕಚ್ಚಲರಿಯನೆ
ಕಟ್ಟೆರುವೆಯನು ಕಂಡರೆ ಬವ್ವೆಂದು–ಚಿಟ್ಟನೆ
ಚೀರುವನೆ
ಕಟ್ಟೆಯ ಹಿಡಿದು ನಡೆಸಲು ರಂಗ ದಟ್ಟಡಿ
ಇಕ್ಕುವನೆ
ಭ್ರಷ್ಟ ಮಾತುಗಳೆಷ್ಟೊ ಕಲ್ಪಿಸಿ
ಪಟ್ಟು ಪಟ್ಟಿಗೆ ರಟ್ಟು ಮಾಡುವುದು ॥

ಯಶೋದೆಯು ದೂರಿತ್ತ ಗೋಪಿಯರಿದುರಿಗೆ ಕೃಷ್ಣನ ಪರವಹಿಸಿ ತನ್ನ ಮಗನಂತಹ ಮುಗ್ಧ ಗಂಭೀರ ಶಿಶು ಮತ್ತೊಂದಿಲ್ಲವೆಂದೇ ನೋದಾಹರಣವಾಗಿ ಹೇಳಿ ಕಳುಹಿಸಿದರೂ ಕೃಷ್ಣನ ಚೇಷ್ಟೆಗಳು ಆಕೆಗೆ ಅಪರಿಚಿತವಾಗಿರಲಿಲ್ಲ. ಅವನ ಚೇಷ್ಟೆಗಳನ್ನು ಆಕೆ ಪಟ್ಟಿ ಮಾಡುತ್ತಾ, ಹೀಗೆ ಅವನಿಗೆ ಹೇಳುತ್ತಾಳೆ.

ಏನ ಮಾಡಲಿ ಮಗನೆ ಏಕೆ ಬೆಳಗಾಯಿತು
ಮಾನಿನಿಯರು ಬಂದು ಮಾನ ಕಳೆಯುವರು
॥ ಪ ॥

ಹಾಲು ಮೊಸರು ಬೆಣ್ಣೆ ಕದ್ದನೆಂತೆಂಬುವರು
ಮೇಲಿಟ್ಟ ಕೆನೆಯನು ಮೆದ್ದನೆಂಬುವರು
ಬಾಲಕನೆಲ್ಲರ ಬಡಿದನೆಂಬರು ಎಂಥ
ಕಾಳು ಹೆಂಗುಸು ಇವನ ಹಡೆದಳೆಂಬುವರೊ
॥ ೧ ॥

ಕಟ್ಟಿದ ಕರುಗಳ ಬಿಟ್ಟನೆಂತೆಂಬರು
ಮೆಟ್ಟಿ ಸರ್ಪನ ಮೇಲೆ ತುಳಿದನೆಂಬುವರೊ
ಪುಟ್ಟ ಬಾಲೆಯರ ಮೋಹಿಸಿದನೆಂಬರೊ
ಎಂಥ
ಕೆಟ್ಟ ಹೆಂಗಸು ಇವನ ಹಡೆದಳೆಂಬುವರೊ
॥ ೨ ॥

ಗಂಗಾಜನಕ ನಿನ್ನ ಜಾರನೆಂತೆಂಬರೊ
ಶೃಂಗಾರಮುಖ ನಿನ್ನ ಬರಿದೆ ದೂರುವರೊ
ಮಂಗಳಮಹಿಮ ಶ್ರೀಪುರಂದರ ವಿಠ್ಠಲ
ಹಿಂಗದೆ ಎಮ್ಮನು ಸಲಹೆಂತೆಂಬುವರೊ ॥ ೩ ॥

ಯಶೋದೆ ಸೈರಣೆಗೆಡದೆ ಶಾಂತಿ ಸಮಾಧಾನಗಳಿಂದ ಅಕ್ಕರೆಯ ಸಕ್ಕರೆಯ ಮಾತುಗಳಾಡಿರುವುದರಲ್ಲಿ ಆಕೆಯ ವಾತ್ಸಲ್ಯಾತಿರೇಕವನ್ನು ಗುರುತಿಸಬಹುದು. ಪ್ರೀತಿ–ವಾತ್ಸಲ್ಯ ಯಾರಲ್ಲಿರುವುದೋ ಅವರು ಮಾಡುವ ಎಂತಹ ದೊಡ್ಡ ತಪ್ಪುಗಳೂ ಸಣ್ಣದಾಗುತ್ತದೆ; ಅಪರಾಧಗಳನ್ನು ಮಾಡಿರುವರೆಂದು ಮನದಟ್ಟಾದರೂ ಕೋಪ

ಉಕ್ಕಲಾರದು; ಕೆಡೆನುಡಿಯುವ ಮಾತಂತೂ ದೂರವೇ ಉಳಿಯುತ್ತದೆ. ಅವರ ಅಸಮಾಧಾನ ವೆಲ್ಲಾ ಆ ವ್ಯಕ್ತಿಯನ್ನು ಅಂಗಲಾಚುವ ಮೊರೆಯಲ್ಲಿ ಕರಗಿ ಹೋಗುತ್ತದೆ. ಯಶೋದೆ ಮತ್ತು ನಂದಗೋಕುಲದ ಗೋಪಿಕಾವೃಂದದವರ ಈ ನುಡಿಗಳಲ್ಲಿ ಈ ಬಗೆಯ ನೈಜ ವಾತ್ಸಲ್ಯ ತುಂಬಿ ಸೂಸಿರಲು ಪುರಂದರದಾಸರ ಭಗವದ್ಭಕ್ತಿಯೇ ಮೂಲದ್ರವ್ಯವೆನಿಸುತ್ತದೆ.

ಕೃಷ್ಣನು ಮನೆಯೊಳಗೆ ಹಾಗೂ ಮನೆಯ ಹೊರಗೆ ಇದ್ದವರಿಗೆ ಎಷ್ಟೇ ಕಾಟ ಕೊಟ್ಟರೂ ಅವನು ಮುಂಜಾನೆ ಏಳಬೇಕಾದ ಹೊತ್ತಿಗೆ ಏಳದಿದ್ದರೆ ಯಶೋದೆಯ ಮನಸ್ಸು ಕೃಷ್ಣನ ಕಾಟ ಕಡಿಮೆಯಾಯಿತೆಂದು ಸ್ವಸ್ಥವಾಗುತ್ತಿರಲಿಲ್ಲ, ಆಕೆಯ ವಾತ್ಸಲ್ಯ ಮಲಗಿರುವ ಮಗನನ್ನೆಬ್ಬಿಸುತ್ತಿತ್ತು; 'ಆಯುಷ್ಯವಂತನಾಗು, ಮಾಯಾವಿ ಖಳರ ಮರ್ದನನಾಗು, ಧೀರನಾಗು, ದಯಾಂಬುಧಿಯಾಗು, ದ್ವಾರಾವತಿಗೆ ನೀ ದೊರೆಯಾಗು' ಎಂದು ಹರಸುತ್ತಾ ಅಭ್ಯಂಗವನ್ನು ಮಾಡಿಸಿ, "ಬಿಸಿದೋಸೆಯ ಹೊಯ್ದು, ಮೊಸರು ಗಡ್ಡೆಯ ತೆಗೆದು ಹೊಸದಾದ ಹಸುವಿನೀ ತುಪ್ಪವನ್ನು ಹಾಕಿ", ತಿನ್ನುವುದಿಲ್ಲವೆಂದು ಹಠ ಮಾಡುವ ಕೃಷ್ಣನನ್ನು ಹಿಡಿದು ಮುದ್ದಾಡಿ, ಸಮಾಧಾನ ಪಡಿಸಿ, ತಿನ್ನಿಸಲು ಯತ್ನಿಸುತ್ತಾಳೆ. ಒಳ್ಳೆಯ ಮಾತಿಗೆ ಬಗ್ಗದೆ ತಿನ್ನುವುದಿಲ್ಲವೆಂದು ಕೃಷ್ಣ ಹಠ ಹಿಡಿದಾಗ ಆಕೆಗೆ ಸೈರಣೆ ಒಡೆಯುತ್ತದೆ. ಕೃಷ್ಣನ ಚೇಷ್ಟೆಗಳಿಗೆ ಕೋಪಿಸಿಕೊಳ್ಳದ ಆ ಮನಸ್ಸು ಅವನು ಉಪವಾಸ ಮಾಡಲು ಹೊರಟಾಗ ಮಾತ್ರ ವ್ಯಗ್ರವಾಗುತ್ತೆ. ಬಾಲಕ ಉಣ್ಣದೆ ಸೊರಗುವನೆಂಬ ಚಿಂತೆ ಅವಳ ಮನಸ್ಸಿನಲ್ಲಿ ಕೋಪವನ್ನು ತೀವ್ರತ್ತದೆ. ಆದರೂ ಅವನ ಮೇಲೆ ಬೆತ್ತದ ಪ್ರಯೋಗ ಮಾಡಲಾರಳು; ಆ ಸಂದರ್ಭದಲ್ಲಿಯೂ ಅವಳ ವಾತ್ಸಲ್ಯ ಕೆಲಸ ಮಾಡುತ್ತದೆ; ಮೊದಲು ಅವನನ್ನು ಹೆದರಿಸಿ ದಾರಿಗೆ ತರೋಣವೆಂಬುದು ಆಕೆಯ ಪ್ರಯತ್ನ.

'ಬೂಚಿ ಬಂದಿದೆ ರಂಗ ಬೂಚಿ ಬಂದಿದೆ' ಎಂದು ಹೇಳುವ ಆಕೆ ಬ್ರಹ್ಮ, ಶಂಕರ, ಇಂದ್ರ, ಷಣ್ಮುಖ, ಹನುಮಂತ ಮೊದಲಾದ ಶ್ರೀಹರಿಯ ಪರಿವಾರ ದೇವತೆಯರ ಆಕಾರ ವಿಕಾರತೆಯನ್ನು ವರ್ಣಿಸಿ, 'ಬೇಗ ತಿಂಡಿಯನ್ನು ತಿಂದು ಬಿಡು' ಎಂದು ಪುಸಲಾಯಿಸುತ್ತಾಳೆ. 'ಇವನ ಹಿಡಿದು ಕೊಂಡು ಹೋಗೆಲೊ ಜೋಗಿ, ಇವ ನಮ್ಮ ಮಾತು ಕೇಳದೆ ಪುಂಡನಾದನು' ಎಂದು ಬೀದಿಯಲ್ಲಿ ಹೋಗುತ್ತಿರುವ ಜೋಗಿಯನ್ನು ಕರೆದು ಕೃಷ್ಣನು ಬೇರೆ ಬೇರೆ ಅವತಾರಗಳೆತ್ತಿದಾಗ ತೋರಿದ ಘಟನೆಗಳನ್ನು ಟೀಕಿಸಿ "ಅತ್ತ ಹಿಡಿದು ಕೊಂಡು ಹೋಗಯ್ಯ ಜೋಗಿ" ಎನ್ನುತ್ತಾಳೆ. ಈ ಸಂದರ್ಭದಲ್ಲಿ ಪುರಂದರದಾಸರು ಭಗವಂತನನ್ನೇ ಜೋಗಿ ಎಂದಿದ್ದಾರೆ. 'ಹುಲ್ಲಲಿ ಬ್ರಾಹ್ಮಣನ ಕಣ್ಣು ಕುಕ್ಕಿದ ಜೋಗಿ' ಎಂಬ ವಾಕ್ಯದಲ್ಲಿ ವಾಮನನು ಗಿಂಡಿಯಲ್ಲಿ ನೀರು ಬೀಳದಂತೆ ಅಡ್ಡವಾಗಿ ಅವಿತಿದ್ದ ಶುಕ್ರಾಚಾರ್ಯರ ಕಣ್ಣನ್ನು ಕಳೆದ ಕಥೆಯನ್ನು ಕೃಷ್ಣನಿಗೆ ಹೇಳಿ ಭಯೋತ್ಪಾದಿಸಿರುವ ರೀತಿ ಮಾರ್ಮಿಕವಾಗಿದೆ. ಆದರೇನು? ಕೃಷ್ಣನು ಮಾತ್ರ ತಿಂಡಿಯನ್ನು ತಿನ್ನಲಿಲ್ಲವಂತೆ! 'ನಮ್ಮಪ್ಪ ಸುಮ್ಮಗಿರೊ–ಗೋಪಾಲ ಗುಮ್ಮನು ಎಳದೊಯ್ವನು' ಎಂದು ಯಶೋದೆ ತಾನೇ ಭಯಗ್ರಸ್ತಳಾದವಳಂತೆ ನಟಿಸಿ ಮತ್ತೊಬ್ಬ ಗುಮ್ಮನನ್ನು ತನ್ನ ಮಾತಿನ ಮೂಲಕ ಕೃಷ್ಣನ ಮುಂದೆ ತಂದು ನಿಲ್ಲಿಸುವಳು.

'ಎಡದ ಕೈಯಲಿ ಕಪಾಲ, ಬಲದ ಕೈಯಲಿ ತ್ರಿಶೂಲ, ಚಳಬೆಟ್ಟದ ಹೆಣ್ಣು (ಪರ್ವತರಾಜನ ಪುತ್ರಿ–ಪಾರ್ವತಿ) ಮೈಯೊಳಿಟ್ಟವನಂತೆ; ಅಲೆದು ಸ್ಮಶಾನದ ತಿರುಗುವನಂತೆ; ಮೂರು ಕಣ್ಣಿನವನೋ, ಐದು ತಲೆಗಳವನೊ, ದಾರಿಯ ಪೋಗುವ ನಾರಿಯನೆಳತಂದು ಸೇರಿಸಿ ಶಿರದಲ್ಲಿ ಹೊತ್ತನೊ (ಗಂಗೆ) ಚಂದ್ರನರ್ಧದ ಪಿಡಿದು ತಲೆಯ ಮೇಲೆ ಚೊದಕಿಟ್ಟಿರುವನಂತೆ! ಅನಲ ನೇತ್ರನಂತೆ! ಮುಂದಿಪ್ಪ ಹುಡುಗನ (ಮನ್ಮಥ) ಕೊಂದು ತಿಂದವನಂತೆ! ಪನ್ನಗಭೂಷಣನೊ ಕರಿಯಜಿನ ಪೊತ್ತವನೊ' ಎಂದು ಶಿವನ ರೂಪ ವೇಷಭೂಷಣಗಳನ್ನು ಯಶೋದೆ ವರ್ಣಿಸಿ ಮ... ನನ್ನು ತನ್ನ ಮಾರ್ಗಕ್ಕೆ ತರಲು ಯತ್ನಿಸಿದರೂ ಕೃಷ್ಣನು ಈ ಯಾವ ಬೂಚಿ, ಜೋಗಿ, ಗುಮ್... ಗಳ ವಿಕಾರ ರೂಪಗಳ ವರ್ಣನೆಗೂ ಹೆದರಲಿಲ್ಲ ತನ್ನ ಬಾಯಿಯನ್ನು ಬಿಡಲಿಲ್ಲ; 'ಗುಮ್ಮನೆಲ್ಲಿ... ತೋರಮ್ಮ-ನಮ್ಮಮ್ಮ ಸುಮ್ಮನಂಜಿಸಬೇಡಮ್ಮಾ... ಎಂದು ತಾಯಿಗೆ ಸವಾಲು ಹಾಕುವ ಧೀರನಾ... ದನು! 'ಪಂಚಶತಕೋಟಿ ವಿಸ್ತೀರ್ಣದ ಭೂಮಿಯ... ವಂಚನೆಯಿಲ್ಲದೆ ತಿರುಗಿ ಬಂದರೂ, ಈರೇಳ... ಲೋಕವನುದರದೊಳಗಿಟ್ಟು, ಬ್ರಹ್ಮಾಂಡವನು... ಬಾಯೊಳಗೆ ತೋರಿದರೂ, ಕಾಳಿಯ ಮಡುವಿ... ಧುಮುಕಿ ಹುಡುಕಿದರೂ ಆ ಗುಮ್ಮ ನನ... ಕೈಗಂತೂ ಸಿಕ್ಕಲಿಲ್ಲ; ನೀನಾದರೂ ತೋರಿಸು... ಸರಿಯಾಗಿ ಕಣ್ಣು ಬಿಟ್ಟು ನೋಡುತ್ತೇನೆ' ಎಂದ... ತಾಯಿಗೆ ಪಡಿನುಡಿದು ತನ್ನನ್ನು ಹೆದರಿಸು... ಗಂಡು ಬ್ರಹ್ಮಾಂಡದಲ್ಲಿಯೇ ಇಲ್ಲವೆಂದ... ಪುರಂದರದಾಸರ ಕೃಷ್ಣ ಸ್ಪಷ್ಟಪಡಿಸಿರುವನು.

ಅಳುವುದು ಮಕ್ಕಳ ಅಪರೂಪ ಕ್ರಿಯೆಯಲ್ಲ... ಆದರೆ ಅನೇಕ ವೇಳೆ ಆ ಮಕ್ಕಳು ಏಕೆ ಅಳುತ್ತಿ... ಯೆಂಬುದು ಸಮಾಧಾನ ಪಡಿಸುವರಿಗೆ ಅರಿವ... ಗದು. ಆಗ ಪೋಷಕರು ಮಗುವಿನ ರೋದನ... ಮೂಲಕಾರಣಗಳನ್ನು ತಮ್ಮದೇ ಆದ ರೀತಿಯ... ತರ್ಕಿಸುವರು. ತಮಗೆ ತೋಚಿದ ರೀತಿಯ... ಪರಿಹರಿಸುವ ಪ್ರಯತ್ನ ಮಾಡುವರು. ಗೋ... ಯರು ಕೃಷ್ಣನನ್ನು ತೊಟ್ಟಿಲಲ್ಲಿ ಮಲಗಿ... ತೂಗುತ್ತಾ, ಹಾಡುಗಳನ್ನು ಹೇಳುತ್ತಾ ನಿ... ಗೈಸುವ ಪ್ರಯತ್ನ ಮಾಡಿದರಂತೆ; ಆದರೆ ಕೃ... ಮಲಗಲಿಲ್ಲ; ಒಂದೇ ಸಮನಾಗಿ ರೋಧಿಸಲಾರ... ಭಿಸಿದನು. ಆ ವಾತ್ಸಲ್ಯಭರಿತ ಹೃದಯರಾ... ಗೋಪಿಯರಿಗೆ ಕೃಷ್ಣನ ರೋದನದಿಂದಲ... ಬೇಸರವಾಗಲಿಲ್ಲ; 'ಬಾರೆ ಗೋಪಮ್ಮ ನಿ... ಬಾಲಯ್ಯನಳುತಾನೆ' ಎಂದು ಅವರು ಯಶೋ... ಯನ್ನು ಹತ್ತಿರ ಕರೆದು ಕೃಷ್ಣನು ಅಳುತ್ತಿರು... ದಕ್ಕೆ ಕಾರಣಗಳನ್ನು ಹೀಗೆ ವಿವರಿಸುತ್ತಾರೆ:

'ನೀರೊಳಗಾಡಿ ಮೈಯೊರಸೆಂದು ಅಳುತಾ...
ಮೇರುವ ಹೊತ್ತು ಮೈಭಾರವೆಂದಳುತಾನೆ
ಧರೆಯ ನೆಗಹಿ ತನ್ನ ದಾಡೆ ನೊಂದಳುತಾನೆ
ದುರುಳ ರಕ್ಕಸನ ಕರುಳ ಕಂಡಳುತಾನೆ ॥ ೧...
ನೆಲವನಳೆದು ಪುಟ್ಟ ಚರಣ ನೊಂದಳುತಾನೆ
ಛಲದಿಂದ ಕೊಡಲಿಯ ಪಿಡಿವೆನೆಂದಳುತಾನೆ
ಬಲು ಕಪಿಗಳ ಕಂಡಂಜಿಕೊಂಡಳುತಾನೆ
ನೆಲುವಿನ ಬೆಣ್ಣೆ ಕೈನಿಲುಕದೆಂದಳುತಾನೆ ॥ ೨...

(28 ನೇ ಪುಟ ನೋ...

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

ಶ್ರೀಮನ್ನಾರಾಯಣನು ಪಂಚವ್ಯೂಹಗಳಲ್ಲಿರುವನೆಂದು ಭಗವಚ್ಛಾಸ್ತ್ರವು ತಿಳಿಸುತ್ತದೆ. ಇವುಗಳನ್ನು ಮನುಷ್ಯರಾರೂ ನೋಡಿಲ್ಲ. ವಿಭವಾವತಾರಗಳು ಎಂದೋ ಸಮಾಪ್ತಿಯಾಗಿವೆ. ಹಾಗಾದರೆ ನಾವು ಅವನನ್ನು ಕಾಣುವುದು ಎಲ್ಲಿ, ಹೇಗೆ ಮತ್ತು ಯಾವ ರೂಪದಲ್ಲಿ? ಇದಕ್ಕೆ ಉತ್ತರ 'ಅರ್ಚಾವತಾರ'. 'ಅರ್ಚ' ಎಂದರೆ ಪ್ರತಿಮೆ ಎಂದು ಅರ್ಥ, ಭಕ್ತಪರಾಧೀನನಾದ ಆ ಪ್ರಭುವು ಜೀವಕೋಟಿ ತನ್ನನ್ನು ಎಂದೆಂದೂ ಅರ್ಚಿಸಿ ಸೇವೆಮಾಡಲು ದಿವ್ಯಕ್ಷೇತ್ರಗಳಲ್ಲಿ ಮತ್ತು ಮನೆಮಠಗಳಲ್ಲಿ ವಿಗ್ರಹರೂಪದಲ್ಲಿ ನೆಲೆಸಿದ್ದಾನೆ. ಅವನು 'ಶುದ್ಧಸತ್ತ್ವಮಯನೂ' ಮತ್ತು 'ದಿವ್ಯಮಂಗಳ ವಿಗ್ರಹಯುಕ್ತನೂ' ಎಂದು ವೇದಗಳಲ್ಲಿ ಉಲ್ಲೇಖವಿದೆ. ಇದು ಅವನ ಜ್ಞಾನಶಕ್ತ್ಯಾದಿ ಗುಣಗಳ ಪ್ರತೀಕವಾಗಿದೆ. ಅವನ ಕಲ್ಯಾಣ ಗುಣಾತಿಶಯಗಳಿಗೆ ಅರ್ಚಾವತಾರವೇ ಗುರುತು ಎಂದು ಆಳ್ವಾರರುಗಳು ಭಾವಿಸಿದ್ದಾರೆ.

'ಪಿನ್ನಾನಾರ್ ವಣಂಗುಂ ಜೋದಿ' ಎನ್ನುವರು ಕಲಿಯುವರು. ನಮ್ಮಾಳ್ವಾರರು ತಿರುವಾಯ್‌ಮೊಳಿಯಲ್ಲಿ (8–8–1) 'ಈ ರೂಪದಲ್ಲಿ ತನ್ನ ಸೌಂದರ್ಯವನ್ನು ತೋರಿ ನಮ್ಮನ್ನು ವಶೀಕರಿಸಿಕೊಳ್ಳುವನು,ಎಂದು ಅರ್ಚೆಯನ್ನು ಹೊಗಳಿದ್ದಾರೆ. ಆದ್ದರಿಂದ ಆಕರ್ಷಕತ್ವವೇ ಅರ್ಚೆಯ ಪರಮಲಕ್ಷಣ. "ಉತ್ ಸವ"–ನಮ್ಮನ್ನು ಸದ್ಗತಿಗೆ ಕೊಂಡೊಯ್ಯುವ ಒಂದು ಯಜ್ಞ ಅಥವ ನಮ್ಮ ಜೀವನದ ಪ್ರಗತಿಯನ್ನು ಸೂಚಿಸುವ ಹಾಗೂ ಜೀವನಕ್ಕೆ ಕಾಂತಿ ಮತ್ತು ಕಳೆಯನ್ನು ತುಂಬಿ ಕೊಡುವ ಯಜ್ಞ. ಮೂಲ ಮೂರ್ತಿಯ ಪ್ರತಿನಿಧಿ ಉತ್ಸವಮೂರ್ತಿ, ಮೂಲವರ ಭಾವವನ್ನು ಪ್ರತಿನಿಧಿಸುವ ಮೆರವಣಿಗೆಯೇ ಉತ್ಸವ. ಈ ಉತ್ಸವ ಮೂರ್ತಿಗಳನ್ನು ಸಂತರು, ದಾಸವರೇಣ್ಯರು ಮತ್ತು ಆಚಾರ್ಯರುಗಳು ವಿವಿಧ ರೀತಿಯಲ್ಲಿ ಕೊಂಡಾಡಿ ವಿವರಣೆ ನೀಡಿದ್ದಾರೆ. ಉದಾ: ಶ್ರೀರಂಗನಾಥನನ್ನೇ ನೋಡುತ್ತಿರುವ ಉಭಯದೇವಿಯರನ್ನು ಪರಾಶರ ಭಟ್ಟರು 'ಇವರುಗಳು ತಮ್ಮ ಕಣ್ಣುಗಳಿಂದ ರಂಗನಾಥನ ಸೌಂದರ್ಯವೆಂಬ ಅಮೃತವನ್ನು ಹೀರುತ್ತಿದ್ದಾರೆ' ಎಂದು 'ರಂಗರಾಜಸ್ತವ'ದಲ್ಲಿ (75) ವರ್ಣಿಸಿದ್ದಾರೆ. ("ಶ್ರೀಭೂಮಿಭ್ಯಾಂ ಅತೃಪ್ತ್ಯಾ ನಯನ ಚುಲಕಸ್ಯ ಸೇವ್ಯಮಾನಾಮೃತೌಘಂ") ಅನೇಕ ಕ್ಷೇತ್ರಗಳಲ್ಲಿ ಮೂಲವರು ಮತ್ತು ಉತ್ಸವರಿಗೆ ಬೇರೆ ನಾಮಧೇಯಗಳಿವೆ. ಉದಾ: ಶ್ರೀನಿವಾಸ–ಮಲೆಯಪ್ಪಸ್ವಾಮಿ, ವೆಂಕಟಕೃಷ್ಣ-ಪಾರ್ಥಸಾರಥಿ ಮೇಲುಕೋಟೆಯ ತಿರುನಾರಾಯಣರು–ಚೆಲುವರಾಯಸ್ವಾಮಿ (ಪ್ರತ್ಯೇಕ ಸನ್ನಿಧಿ ಇದೆ) ನರಸಿಂಹಸ್ವಾಮಿ ಕ್ಷೇತ್ರಗಳಲ್ಲಿ ಉತ್ಸವಮೂರ್ತಿ ವರದರಾಜರು.

# ವೈಭವೋತ್ಸವಗಳು

ಕಾಲಾನುಪ್ರಕಾರ ಉತ್ಸವಗಳನ್ನು ನಿತ್ಯೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ ಎಂದು ವಿಂಗಡಿಸಬಹುದು. ನಾನಾವಿಧವಾದ ಉತ್ಸವಗಳಿವೆ. ಇವುಗಳು ಶಾಸ್ತ್ರೋಕ್ತವಾಗಿಯೂ ಮತ್ತು ಭಕ್ತರ ಅಭೀಷ್ಟದಂತೆ ನಡೆಯುವುದು. ಪ್ರತಿ ಶ್ರವಣದಂದು ದೇಶಿಕರ ಹಾಗೂ ಪ್ರತಿ ಆರುದ್ರಾನಕ್ಷತ್ರದಂದು ಭಾಷ್ಯಕಾರರ ಉತ್ಸವಗಳು ಅನೇಕ ಕ್ಷೇತ್ರಗಳಲ್ಲಿ ನಡೆಯುವುವು. ಅಧ್ಯಯನೋತ್ಸವ ಸಾಮಾನ್ಯ ಉತ್ಸವಗಳಂತೆ ಇಲ್ಲ. ಇದರ ರೀತಿ ಮತ್ತು ಲಕ್ಷಣಗಳೇ ಬೇರೆ, ಉತ್ಸವರನ್ನು ಮಂಟಪದಲ್ಲಿರಿಸಿ, ಇಕ್ಕೆಲಗಳಲ್ಲಿ ಭಾಗವತರುಗಳು ಆಸೀನರಾಗಿ ಪ್ರಬಂಧಪಾರಾಯಣಮಾಡುವರು. 21 ದಿನಗಳು ನಡೆಯುವ ಈ ಉತ್ಸವವನ್ನು 'ಪಹಲ್ ಪತ್ತ್' ಮತ್ತು 'ಇರಾಪತ್ತ್' ಎಂದು ವಿಭಾಗ ಮಾಡಲಾಗಿದೆ. ಪಹಲ್ ಪತ್ತ್‌ನಲ್ಲಿ ಮೊದಲಾಯಿರಂ ಮತ್ತು ಪೆರಿಯತಿರುಮೊಳಿಯನ್ನು, ಇರಾಪತ್ತ್‌ನಲ್ಲಿ ತಿರುವಾಯ್‌ಮೊಳಿಯನ್ನು 21 ನೆ ದಿನ 'ಇಯರ್‌ಪಾ' ಪಾರಾಯಣವನ್ನು ಮಾಡುವರು. ಈ ದಿನಗಳಲ್ಲಿ ಮೂಲವರು ಮತ್ತು ಉತ್ಸವರಿಗೆ ವಿರಾಮವಿರುವುದಿಲ್ಲ.

ಗರ್ಭಗುಡಿ ಮತ್ತು ಇತರ ಸನ್ನಿಧಿಗಳಲ್ಲಿ ಆಗಿರುವ ಅಪವಿತ್ರತೆಯನ್ನು ಹೋಗಲಾಡಿಸುವುದೇ ಪವಿತ್ರೋತ್ಸವ. ಹಿಂದಿನಿಂದಲೂ ಇದು ಒಂದು ಶಾಸ್ತ್ರೋಕ್ತವಾದ ವಿಧಿಯಾಗಿ ಬಂದಿದೆ. ಸಂಪ್ರೋಕ್ಷಣೆ, ಉತ್ಸವರಿಗೆ ಪವಿತ್ರವನ್ನು ಸಮರ್ಪಿಸುವುದು ಮತ್ತು ಪ್ರಾಕಾರೋತ್ಸವ ಈ ಉತ್ಸವದ ವಿವಿಧ ಕಾರ್ಯಕ್ರಮಗಳು. ಬಣ್ಣಬಣ್ಣದ ನೂಲಿನಿಂದ ಉತ್ಸವರ ಆಕಾರಕ್ಕೆ ಸರಿಯಾಗಿ ಪವಿತ್ರಗಳನ್ನು ಮಾಡಿ ಮೂರ್ತಿಯ ಎಲ್ಲಾ ಅವಯವಗಳನ್ನು ವ್ಯಾಪಿಸುವ ಹಾಗೆ ಅರ್ಪಿಸಲಾಗುತ್ತೆ. ನಂತರ ಈ ಪವಿತ್ರವನ್ನು ಭಾಗವತರುಗಳಿಗೆ ಹಂಚಲಾಗುವುದು.

ದೇವಸ್ಥಾನದ ಹೊರ ಪ್ರಾಕಾರದಲ್ಲಿ ಅಥವ ರಾಜಬೀದಿಯಲ್ಲಿ ನಡೆಯುವ ಉತ್ಸವಕ್ಕೆ ತಿರುವೀಧಿ ಉತ್ಸವ ಎಂದು ಹೆಸರು. ಈ ಉತ್ಸವಗಳು ನಾದಸ್ವರ, ಪಂಜು, ದೀವಟಿಗೆ, ಛತ್ರಿ ಚಾಮರಾದಿ ಮರ್ಯಾದೆಗಳಿಂದ ಕೂಡಿರುವುವು ಉತ್ಸವದ ಮುಂದೆ ಪ್ರಬಂಧಗೋಷ್ಠಿಯೂ ಮತ್ತು ಹಿಂಭಾಗದಲ್ಲಿ ವೇದಗೋಷ್ಠಿಯೂ ಇರುವುವು. ಪ್ರಬಂಧವನ್ನು ಭಗವಂತನು ಅನುಸರಿಸುವನು ಮತ್ತು ಅವನನ್ನು ವೇದ ಅನುಸರಿಸುವುದು. ಭಕ್ತಾದಿಗಳು ಸಹ ಭಜನೆ, ಗೀತೆ, ಭಕ್ತಿಭಾವಪೂರಿತವಾದ ನೃತ್ಯಗಳ ಮೂಲಕ ದೇವರನ್ನು ಆರಾಧಿಸುವರು ಇವುಗಳೆಲ್ಲವೂ ಉತ್ಸವಕ್ಕೆ ಸೊಬಗು ಮತ್ತು ವೈಭವವನ್ನು ಕೊಡುವ ಅಂಶಗಳಾಗಿವೆ.

ಬಹಳ ಕಿರಿದಾದ ಉತ್ಸವ ಶಠಾರಿ ಉತ್ಸವ. ತಿರುನಾರಾಯಣಪುರದಲ್ಲಿ ಸುಮಾರು ಹತ್ತು ಕಿ. ಮಿ.

**ಶ್ರೀ ಸಿ. ಗೋವಿಂದಾಚಾರ್**



ದೂರದಲ್ಲಿರುವ ಅಷ್ಟ ತೀರ್ಥಗಳನ್ನು ಬಳಸಿಬರುವುದು. ಯತಿಗಳು, ರಾಷ್ಟ್ರಪತಿ ಮತ್ತು ಇತರ ಗಣ್ಯವ್ಯಕ್ತಿಗಳು ಆಗಮಿಸಿದಾಗ ಶ್ರೀಶಠಾರಿ ಎದುರುಗೊಳ್ಳುವುದು

"ರಥಸ್ಥಂ ಕೇಶವಂ ದೃಷ್ಟ್ವಾ ಪುನರ್ಜನ್ಮನ ವಿದ್ಯತೇ"–ರಥದಲ್ಲಿರುವ ಕೇಶವನನ್ನು ನೋಡಿದರೆ ಪುನರ್ಜನ್ಮವಿಲ್ಲ ಎಂದು ಅರ್ಥವಾಗುವುದು. "ಎಲೈ ಮನುಜನೆ ವ್ಯಂಗ್ಯ ಮತ್ತು ಅಶ್ಲೀಲ ಚಿತ್ರಗಳೆಂಬ ಕೀಳ್ನೋಟವನ್ನು, ಬಿಟ್ಟು ತಲೆ ಎತ್ತಿ ರಥದಲ್ಲಿರುವ ಕೇಶವನನ್ನು ನೋಡಿ ಕೃತಾರ್ಥನಾಗು–ಎಂದು ಆಚಾರ್ಯರು ಉಪದೇಶಮಾಡುವರು. ಜನರು ಉತ್ಸವ ಪ್ರಿಯರು ಎಂದು ತಿಳಿದು, ಗೋಪಿಯರೊಡನೆ ಬೆರೆತು ಆನಂದ ಪಡೆಯುವಂತೆ, ಭಗವಂತನು ಭಕ್ತಸಮೂಹದಲ್ಲೂ ಬೆರೆಯುವನು. ಉದಾ: ವೈಕುಂಠ ಏಕಾದಶಿಯಂದು ಸ್ವರ್ಗದ್ವಾರ ದಾಟುವ ಮುನ್ನ, ರಂಗನಾಥನ ಉತ್ಸವವು ಭಕ್ತಜನರ ಮಧ್ಯೆ ಸೇರುವುದು.

ತೆಪ್ಪೋತ್ಸವದ ಮುಖ್ಯ ಆಕರ್ಷಣೆ ಪುಷ್ಪ ಮತ್ತು ದೀಪಾಲಂಕಾರ. ಮಲಯಾಳದ ದಿವ್ಯ ದೇಶಗಳಲ್ಲಿ ದೀಪೋತ್ಸವ ಬಹಳ ವಿಶೇಷ. ಇಲ್ಲಿಯ ದೀಪ ಶೈಲಿ ಮತ್ತು ರೀತಿ ಎಲ್ಲರನ್ನೂ ಆಕರ್ಷಿಸುತ್ತವೆ. ತಿರುಪತಿ ಮತ್ತು ಉಡುಪಿಯ ಲಕ್ಷ ದೀಪೋತ್ಸವಗಳು ಬಹಳ ಜನಪ್ರಿಯವಾದುವು. ಹತ್ತಾರು ದಿನಗಳ ಕಾರ್ಯಕ್ರಮಗಳ ನಂತರ ದೇವರನ್ನು ಉಯ್ಯಾಲೆ ಮತ್ತು ತೊಟ್ಟಿಲಲ್ಲಿ ಮಲಗಿಸುವುದೇ ಶಯನೋತ್ಸವ, 'ಡೋಲಾಯಮಾನಂ ಗೋವಿಂದಂ' – ಪರಕಾಲ ಆಸ್ಥಾನದ ಲಕ್ಷ್ಮೀಹಯಗ್ರೀವರ ಡೋಲೋತ್ಸವ ಬಹಳ ಮೆಚ್ಚಿಗೆ ಪಡೆದಿದೆ. ನವರತ್ನ ಖಚಿತವಾದ ಈ ತೊಟ್ಟಿಲಿಗೆ, ಚಿನ್ನದ ಸರಪಣಿ ಮತ್ತು ಎಲ್ಲ ಉಪಚಾರವಸ್ತುಗಳು ಇವೆ. ರಾತ್ರಿಡೋಲೋತ್ಸವ ಬಹಳ ರಮ್ಯವಾಗಿರುವುದು. ಕೆಲವು ಉತ್ಸವಗಳಲ್ಲಿ ಹಾಸ್ಯ ಘಟನೆಗಳಿವೆ ಉದಾ 1. ಮೋಲುಕೋಟೆಯ ಅಂಗಮಣಿ ಉತ್ಸವ. 2. ಆಲಂಕಾರರು ಮೀನಾಕ್ಷಿ ಕಲ್ಯಾಣಕ್ಕೆ ಬರುವುದು. ಕರ್ನಾಟಕದ ಕೆಲವು ವಿಷ್ಣು ಕ್ಷೇತ್ರಗಳಲ್ಲಿ (ಕಳಲೆ ಲಕ್ಷ್ಮೀಕಾಂತಸ್ವಾಮಿ) ತೇರಡಿ ಉತ್ಸವವಿರುವುದು.

## ವೈಭವವೆಷ್ಟು? ತಿರುವಾಶಲ್

'ಕಾವೇರಿ ರಂಗನ ನೋಡದ ಕಣ್ಗಳಿದ್ಯಾತಕೊ' ಶ್ರೀಪಾದರಾಜರು. ವೈಕುಂಠ–ಏಕಾದಶಿ ಉತ್ಸವ ವೈಭವದ ಪರಾಕಾಷ್ಠೆ. ಇಂತಹ ವೈಭವದ ಶ್ರೀರಂಗನನ್ನು ನೋಡಿ ತೊಂಡರಡಿಪ್ಪೊಡಿ ಆಳ್ವಾರರು ಮೋಕ್ಷವನ್ನು ನಿರಾಕರಿಸಿದರು. 'ಇವನನ್ನು ನೋಡಿದ ಕಣ್ಗಳು ಬೇರಾವುದನ್ನೂ ನೋಡದಿರಲಿ' ಎಂದರು ಪಾಣರು. ದಶಮಿಯಂದು ಸಂಜೆ ನಂಪೆರುಮಾಳ್‌ಗೆ ಮೋಹಿನೀ ಅಲಂಕಾರದಲ್ಲಿ (ಅಮೃತವನ್ನು ಹಂಚುವ ಭಂಗಿಯಲ್ಲಿ) ಉತ್ಸವ ಜರಗುವುದು. ಏಕಾದಶಿಯಂದು ಶ್ರೀರಂಗನಾಥನಿಗೆ ರತ್ನಾಂಗಿ ತೊಡಿಗೆ ಇರುವುದು. ಬೇರಾವ ದಿನದಲ್ಲೂ ಇದನ್ನು ಹಾಕುವುದಿಲ್ಲ."ನೀ ಉಲಹಮೇಳುದಿ ಕುಡುತ್ತಾಲುಂ ವೇರ್ ಒರ್‌ನಾಳ್ ಅತ್ತೈ ಶಾತ್ತಮಾಟ್ಟೆ" ಎಂದು ಅಳಿಶಿಂಗರ್ ಮಹಾಸ್ವಾಮಿಗಳು ಹೇಳುವುದು ಜ್ಞಾಪಕಕ್ಕೆ ಬರುವುದು. ಶ್ರೀಪಾದರಾಜರು ಈ ಉತ್ಸವವನ್ನು ನೋಡಿ 'ಶ್ರೀರಂಗವಿಠಲನ ಸಿರಿಮುಕುಟಕ್ಕೆ ಶರಣು, ಲಲಾಟಗಳಿಗೆ ಶರಣು, ಸೊಂಪುನೋಟದ ಚೆಲುವ ಸೋಗೆಗಣ್ಣಿಗೆ ಶರಣು, ಗುಂಪುರತ್ನದ ಕರ್ಣಕುಂಡಲಗಳಿಗೆ ಶರಣು, ವಕ್ಷಸ್ಥಳಕ್ಕೆ ಶರಣು, ಕುಬ್ಜೆಯ ಡೊಂಕ ತಿದ್ದಿದ ಭುಜಗಳಿಗೆ ಶರಣು...... ...ಶ್ರೀರಂಗವಿಠಲನ ಸರ್ವಾಂಗಕೆ ಶರಣು, ಎಂದು ರಂಗನಾಥನ ಪ್ರತಿಯೊಂದು ಅವಯವಗಳನ್ನು ಮತ್ತು ದಿವ್ಯಾಭರಣಗಳನ್ನು ಮಂಗಳಾಶಾಸನ ಮಾಡಿದ್ದಾರೆ. ರಾಮಾನುಜ ದಿವಾಕರರೂ ಸಹ ಈ ಭುವನ ಮನೋಹರ ರೂಪವನ್ನು ನೋಡಿ ಶರಣಾಗತಿ ಗದ್ಯದಲ್ಲಿ 'ದಿವ್ಯಾದ್ಭುತ ನಿರವದ್ಯ ನಿರತಿಶಯೌಜ್ವಲ್ಯ, ಸೌಂದರ್ಯ, ಸೌಕುಮಾರ್ಯ ಲಾವಣ್ಯ ಯೌವನಾದ್ಯನಂತ ಗುಣ ನಿಧಿ ದಿವ್ಯರೂಪ' ಎಂದು ಶ್ರೀರಂಗನಾಥನನ್ನು ವರ್ಣಿಸಿದ್ದಾರೆ. "ಗಜಸಿಂಹಗತೀ ವೀರೌ ಶಾರ್ದೂಲ ವೃಷಭೋಪಮೌ" ಎಂದು ವಾಲ್ಮೀಕಿ ಹೇಳಿದಂತೆ 'ಶ್ರೀರಂಗನಡೆ' ಅತ್ಯಂತ ಜನಪ್ರಿಯವಾದುದು. ಈ ನಡೆಗೆ ಆ ದಿವ್ಯಪಾದುಕೆಗಳೇ ಕಾರಣ. ಶ್ರೀರಂಗನಾಥನಿಗೆ ಮಾತ್ರ ಪಾದುಕೆಗಳಿವೆ. ಬೇರಾವ ಉತ್ಸವರಿಗೂ ವಿಗ್ರಹದಲ್ಲಿ ಪಾದುಕೆಗಳಿಲ್ಲ. ಆಂಡಾಳ್ ವಾರಣಮಾಯಿರಂ ೩. ನಲ್ಲಿ ಉಲ್ಲೇಖವಿದೆ. ಇಂತಹ ಅರ್ಚಾವರ್ಣನೆಯನ್ನು ಕೇಳಿ ಆಂಡಾಳ್ ತನ್ನ ಹೃದಯವನ್ನೇ ಆವನಿಗೆ ಸಮರ್ಪಿಸಿದಳು. ಇಂತಹ ಉತ್ಸವವನ್ನು ಸೇವೆ ಮಾಡಿದವರಿಗೆ ಪುನರ್ಜನ್ಮವಿಲ್ಲ ಎಂದು ದೇಶಿಕರು ಪಾದುಕಾಸಹಸ್ರ 275 ರಲ್ಲಿ ಹೇಳಿದ್ದಾರೆ. ಮಣಿಮಂಟಪದಲ್ಲಿರಿಸಿದ ಉತ್ಸವವನ್ನೂ ಕೊಂಡಾಡಿದ್ದಾರೆ (262–ಸಂಚಾರಪದ್ಧತಿ)

ಉತ್ಸವವನ್ನು ಬಿಜಯಮಾಡಿಸುವವರಿಗೆ ವಿಶೇಷ ಮನ್ನಣೆ ಉಡುಪು ಮತ್ತು ಸ್ಥಾನವಿದೆ. ಇವರಿಗೆ 'ಶ್ರೀಮಾನ್‌ತಾಂಗಿಹಾಳ್' ಎಂದು ಹೆಸರು. ಕುದುರೆ ವೈಯ್ಯಾಳಿ, ಅಟ್ಟಹಾಸ ಮತ್ತು ಮತ್ತು ಸರ್ಪನಡೆ ಬಹಳ ಮೆಚ್ಚುಗೆ ಪಡೆದಿದೆ. ಅಂದು ಸಂಜೆ ಅರೆಯರ್‌ಗಳು 2ನಿಮಿಷ ದೇವರನ್ನು 2 ನಿಮಿಷ ಎದುರಿಗಿರುವ ಆಳ್ವಾರುಗಳನ್ನು ತಾಳ ಸಮೇತ ಹಾಡುವರು. ಮೂಲವರಿಗೆ ಈ 10 ದಿನಗಳು ಮುತ್ತಂಗಿ ಅಲಂಕಾರ ಮಾಡಿರುತ್ತಾರೆ. ನಮ್ಮ ನೋಟ ತೆಳುವಾದ ಪರದೆಯ ಮೂಲಕವೇ ಹಾದು ಹೋಗಬೇಕು.

## ಪರಮಪದೋತ್ಸವ

ಈ ಉತ್ಸವದಲ್ಲಿ ನಮ್ಮಾಳ್ವಾರರನ್ನು ಪೂರ್ತಿಯಾಗಿ ತುಲಸಿಯಿಂದ ಅಲಂಕರಿಸಲಾಗುವುದು– ಸನ್ನಿಧಿಗೆ ಕರೆದೊಯ್ಯುವರು–ಭಕ್ತಕೋಟಿ ಬಹಳ ದುಃಖದಿಂದ ವೈಕುಂಠನಾಥನನ್ನು ಬೇಡುವುದು. 'ತಂದೊಂ' 'ತಂದೊಂ' ಎಂದು ಭಗವಂತನು ಆಳ್ವಾರರನ್ನು ಭಕ್ತರಿಗೊಪ್ಪಿಸುವನು. ಇದರ ಹಿಂದಿನದಿನ ಆಳ್ವಾರರನ್ನು ವಿಷ್ಣುವಿನಂತೆ ಮತ್ತು ರಾಮಾನುಜರನ್ನು ನಾಯಕಿಯಂತೆಯೂ ಅಲಂಕಾರ ಮಾಡಿ ಉತ್ಸವಮಾಡುವರು.

## ಮಲೈಯಪ್ಪನ್

ಎಲ್ಲರಿಗಿಂತ ಅತ್ಯಂತ ವೈಭವದ ದೇವರು ಮಲೆಯಪ್ಪಸ್ವಾಮಿ. ಸಿರಿತನಕ್ಕೆ ಮಿಗಿಲಾದ ವೈಭವ ಮನೆಮಾತಾಗಿರುವ ಕಲ್ಯಾಣೋತ್ಸವ, ಅನೇಕ ವಾಹನೋತ್ಸವಗಳು ನಿತ್ಯೋತ್ಸವಗಳಾಗಿವೆ. ಈ ಮೂರ್ತಿಯ ಹಣೆಯಲ್ಲಿರುವ ವಡಗಲೈ ಪುಂಡ್ರವು ಒಂದು ವಿಶೇಷ. ಬೇರಾವ ಉತ್ಸವರಿಗೂ ಈ ರೀತಿ ಪುಂಡ್ರವಿರುವುದಿಲ್ಲ. ತಿರುಪತಿ ಬ್ರಹ್ಮೋತ್ಸವ ಇಡೀ ಭಾರತದಲ್ಲೇ ಅದ್ವಿತೀಯವಾದುದು. ಬ್ರಹ್ಮೋತ್ಸವವು ಇಲ್ಲಿಂದಲ್ಲೇ ಪ್ರಾರಂಭವಾಗಿರಬಹುದು. ಏಕೆಂದರೆ ಶ್ರೀನಿವಾಸಮೂರ್ತಿ ಅತ್ಯಂತ ಪ್ರಾಚೀನವಾದುದು ಎಂದು ತಮಿಳು ಪುರಾಣ ಹೇಳುವುದು. ವಿಜಯದಾಸರು ಈ ಸೀಯೋತ್ಸವವನ್ನು ಕಂಡು 'ಸಾಗಿಬಾರಯ್ಯ ನೀನು ಗೋವಿಂದ ವೆಂಕಟ...............ರಥದ ಮಧ್ಯದಲಿಪ್ಪನೆ ರಥಾಂಡಜವಾಹನನೆ' ಎಂದು ಹೊಗಳಿ ಮಂಗಳವನ್ನು ಹಾಡಿದ್ದಾರೆ. ಈ ಮಹೋತ್ಸವದಲ್ಲಿ ಸಂಗೀತ, ನೃತ್ಯ, ನಾಟಕ, ಭಜನೆ, ಉಪನ್ಯಾಸಗಳು ಬಿಡುವಿಲ್ಲದೆ ಸಾಗುವುವು.

## ಗರುಡಸೇವೆ

'ವಿನತಾಸುತ ವಾಹನುಡೈ ವೆಡಲೇ' ಶ್ರೀ ಕಂಚಿ ವರದ–ತ್ಯಾಗರಾಜರು. ವರದರಾಜ ಎಲ್ಲರಿಗಿಂತ ಅತ್ಯಂತ ಚೆಂದುಳ್ಳಮೂರ್ತಿ. ಈ ತೇಜೋಮಯನನ್ನು ನೋಡಿದ ದೇಶಿಕರು 'ನನಗೆ ಮೋಕ್ಷಪಡೆಯಬೇಕೆಂಬ ಅಭಿಲಾಷೆಯೇ ಮರೆತು ಹೋಗುವುದು.' ಎಂದು ಹೇಳಿದ್ದಾರೆ. ದೇಶಿಕರ ಸನ್ನಿಧಿಯ ಮುಂದೆ ರಾತ್ರಿ 3 ಗಂಟೆಯಿಂದಲೇ ಗರುಡೋತ್ಸವಕ್ಕೆ ಸಜ್ಜುಗೊಳಿಸಲಾಗುವುದು. ಉಭಯ ನಾಚ್ಚಿಯಾರ್‌ರಹಿತ ವರದನನ್ನು ಗರುಡನಮೇಲೆ ಕುಳ್ಳಿರಿಸಿ ಒಂದು ಶುಭಮುಹೂರ್ತದಲ್ಲಿ ಉತ್ಸವ ಹೊರಡುವುದು. ಮಹಾದ್ವಾರದಲ್ಲಿ ದೊಡ್ಡಯ್ಯಾಚಾರ್ಯರ 'ಗೋಪುರ ಸೇವೆ (ಕರ್ಪೂರ ಆರತಿ) ಆದ ನಂತರ ಕೊಡೆ ಬದಲಾಯಿಸುವುದನ್ನು ನೋಡಬಹುದು. ಕಂಚಿ ಕೊಡೆ ಹಿಡಿಯುವುದು ಮತ್ತು ಬದಲಾಯಿಸುವುದು ಒಂದು ಕಲೆಯೇ ಸರಿ. ಉತ್ಸವವೂ ರಾಜಬೀದಿಯಲ್ಲಿ ಮುಂದುವರೆದು ತೂಪ್ಪಿಲ್‌ನಲ್ಲಿ 30 ನಿಮಿಷಗಳ ಕಾಲ ತಂಗಿದ್ದು ನಂತರ ಮುಂದುವರೆದು ಕಾಮಕೋಟಿಪೀಠ, ಗಂಗೈ ಕೊಂಡನ್ ಮಂಟಪ ಮತ್ತು ಇನ್ನು ಅನೇಕ ಪ್ರಮುಖಬೀದಿಗಳಲ್ಲಿ ಹಾದು ಆಸ್ಥಾನ ಸೇರುವುದು.

## ಮೇಲು ಕೋಟೆ

ಚೆಲುವರಾಯಸ್ವಾಮಿಗೆ 'ರಾಮಪ್ರಿಯ' ಎಂದು ಹೆಸರು. ವೈರಮುಡಿ ಉತ್ಸವವು ರಾತ್ರಿಯಿಂದ ಬೆಳಗಿನ ಜಾವದವರೆಗೂ ನಿದಾನವಾಗಿ ವ್ಯೂಹಕ್ರಮದಲ್ಲಿ ದಿವ್ಯದೀಪಾಲಂಕಾರಸಮೇತ ಜರುಗುವುದು. ಸೂರ್ಯೋದಯಕ್ಕೆ ಮುಂಚೆ ವೈರಮುಡಿಯನ್ನು ತೆಗೆದು ಕೆಂಪು ಹರಳಿನ ರಾಜಮುಡಿಯನ್ನು ಧರಿಸುವರು. (ರಾಜಒಡೆಯರ ಸೇವೆ) ರಾಮಾನುಜರ ತಿರುನಕ್ಷತ್ರ ಮತ್ತೊಂದು ವೈಭವೋತ್ಸವ. ಅಂದು ಬೆಳಿಗ್ಗೆ ಆಚಾರ್ಯರಿಗೆ ರಥೋತ್ಸವ, ಸಂಜೆ ಪೂರ್ಣಗಂಧಾಲಂಕಾರಸಮೇತ ಸೀತಾರಣ್ಯಕ್ಕೆ ಹೋಗಿ ಬರುವರು. ರಾತ್ರಿ ಚೆಲುವನಿಂದ ಚತುರ್ವೀಧಿಗಳಲ್ಲಿ ದಶಾವತಾರ ಇದಿರುಸೇವೆ ಉತ್ಸವ. ಇತರೆ ಕಾರ್ಯಕ್ರಮಗಳು ಬೆಳಗಿನ ಜಾವ 4 ಘಂಟೆಯುವರೆಗೂ ನಡೆಯುವುದು. ಇಲ್ಲಿಯ ಸ್ಥಳೀಯರಿಗೆ ನೆಚ್ಚಿನ ಉತ್ಸವ 'ವೈಯಾಳಿಕ್ಕೈ ಕೋಡೆ ತಿರುನಾಳ್' ಎಂಬ ಬಿಸಿಲು ಮಹಡಿ ಉತ್ಸವ. ಇಲ್ಲಿ ಶೆಲ್ವ ಪಿಳ್ಳೈಯನ್ನು ವೈಕುಂಠನಾಥನ ಅಲಂಕಾರಸಮೇತ ದೇವಸ್ಥಾನದ ಮೆಲ್ಭಾಗಕ್ಕೆ ವಿಹಾರಕ್ಕೆಂದು ಬಿಜಯಮಾಡಿಸುವರು.

## ಪಡಿ ಉತ್ಸವ

ದೇಶಿಕರೋ, ವಿಷ್ಣುವೋ? ಈ ಸಂದೇಹ ಸಹಜವಾಗಿ ಮೂಡುವುದು. ಕಾರಣ ಅಂದು ಆಚಾರ್ಯರಿಗೆ ಶಂಖ ಚಕ್ರಾದಿಗಳ ಅಲಂಕಾರವಿರುವುದು. ತಿರುನಕ್ಷತ್ರದಂದು ಬೆಳಿಗ್ಗೆ ಹೇಮಾಬ್ಜವಲ್ಲಿ ದೇವನಾಯಕರು ದೇಶಿಕರ ಸನ್ನಿಧಿಗೆ ಬರುವರು. ದೇಶಿಕರಿಗೆ ಸುಪ್ರಭಾತವಾಗಿ ನಿತ್ಯಾರಾಧನೆಗಳ ನಂತರ ಔಷಧಾಚಲಕ್ಕೆ ದೇಶಿಕರು ತೆರಳುವರು. ಅಲ್ಲಿ ಸುಮಾರು 2 ಗಂಟೆಗಳ ಕಾರ್ಯಕ್ರಮವಿರುವುದು ನಂತರ ಪಡಿಉತ್ಸವ ಪ್ರಾರಂಭವಾಗುವುದು. ಪ್ರತಿಯೊಂದು ಪಡಿ ಇಳಿಯುವಾಗಲೂ ಮಂಗಳಾಶಾಸನ, 'ಸ್ವಾಮಿ ಎಚ್ಚರಿಕೈ' ಎಂಬ ಪರಾಕ್, ಬಿರುದು ಕೀರ್ತಿಗಳನ್ನು ಕೊಂಡಾಡುವುದು ಮತ್ತು ಮಂಗಳಾರತಿಯಾಗುವುದು ಇತ್ಯಾದಿಗಳು ಪಡಿ ಉತ್ಸವದ ವೈಖರಿ. ಈ ದಿವ್ಯವಾದ ಉತ್ಸವವನ್ನು ಬೆಟ್ಟದಡಿಯಿಂದ ವೀಕ್ಷಿಸಲು ಬಹಳ ರಮ್ಯವಾಗಿರುವುದು. ಆಸ್ಥಾನಕ್ಕೆ ಹಿಂದಿರುಗುವಾಗ ಉತ್ಸವವು ಅಟ್ಟಹಾಸದ ನಡೆಯಿಂದ ಕೂಡಿರುತ್ತದೆ. ನಡೆಗೆ ತಕ್ಕಂತೆ ನಾದಸ್ವರ ತವಿಲ್‌ಗಳನ್ನು ನುಡಿಸುವರು. ಈ ದಿನಗಳಲ್ಲಿ ತಿರುವಹೀಂದ್ರ ಪುರದಲ್ಲಿ ರಾತ್ರಿ ಹಗಲು ವ್ಯತಾಸವಿರುವುದಿಲ್ಲ. ಇದೇ ದಿನ ಕಂಚಿಯಲ್ಲೂ ಸಹ ತೂಪ್ಪಿಲ್‌ನಿಂದ ದೇಶಿಕರ ಉತ್ಸವ (ಅಂಜಲಿ ಬದ್ಧರಾಗಿ) ಹೊರಟು ವರದನ ತಿರುವಡಿಗಳಲ್ಲಿ ಸಂಜೆವರೆಗೂ ಇದ್ದು ಹಿಂತಿರುಗುವುದು. ಇಂತಹ ಯೋಗದೆಶೆ ಬೇರಾವ ಆಚಾರ್ಯರಿಗೂ ಇಲ್ಲ ಮತ್ತು ವರದನಡಿಯಲ್ಲಿರುವ ದೇಶಿಕರನ್ನು ಸೇವೆ ಮಾಡಿದವರಿಗೆ ಪ್ರಪತ್ತಿ ಫಲ ಪ್ರಾಪ್ತಿ ಎಂದು ಪೂರ್ವಿಕರ ಅಭಿಪ್ರಾಯವಿದೆ.

ಕುಂಭಕೋಣದ ರಥೋತ್ಸವಕ್ಕೆ 'ಚಕ್ರ' ಎಂದು ಹೆಸರು ಈ ಬೃಹದ್ರಥವನ್ನು ಚಲಿಸಲು ಆನೆ ಮತ್ತು ಬುಲ್‌ಡೋಜರ್‌ಗಳನ್ನು ಉಪಯೋಗಿಸಲಾಗುವುದು.

ಶ್ರೀವಿಲ್ಲಿ ಪುತ್ತೂರಿನಲ್ಲಿ ಆಂಡಾಳ್ ರಂಗಮನ್ನಾರ್ ಕಲ್ಯಾಣೋತ್ಸವ ವಿಶೇಷ. ಇಡೀ ದಕ್ಷಿಣಭಾರತದಲ್ಲೇ ಬಹು ಎತ್ತರ ಹಾಗೂ ಬೃಹದಾಕಾರದ ತೇರು ಇಲ್ಲಿದೆ. ರಥದಲ್ಲಿರುವ ದೇವರನ್ನು ಸುಮಾರು ಅರ್ಧಫರ್ಲಾಂಗ್ ದೂರದಿಂದ ನೋಡಬೇಕು.

ನಾಚ್ಚಿಯಾರ್ ಕೋಯಿಲ್‌ನ ಕಲ್ಗರುಡೋತ್ಸವ ಸ್ವಾರಸ್ಯವಾಗಿದೆ ಇಲ್ಲಿಯ ಗರುಡ ಮೂರ್ತಿ ಪೂರ್ತ ಶಿಲೆಯದು. ಈ ಉತ್ಸವವನ್ನು ಗರ್ಭಗುಡಿಯಿಂದ ನಾಲ್ಕು ಜನರ ಸಹಾಯದಿಂದ ಮುಂದಿನ ದ್ವಾರಕ್ಕೆ ತರುವರು–ಅಲ್ಲಿ 8 ಜನರ ಸಹಾಯದಿಂದ ಇನ್ನೂ ಮುಂದಿನ ದ್ವಾರಕ್ಕೆ ತರುವರು–ತಿರುವೀಧಿಗೆ ಬರಲು 60 ಕ್ಕೂ ಹೆಚ್ಚು ಜನರು ಬಿಜಯಮಾಡಿಸುವರು.

ನಾಂಗೂರಕಲಿಯನರ ಅದ್ಭುತ ಪೂರ್ವ ಚರಿತ್ರೆಯನ್ನು ಮತ್ತು ಅವರಿಗೆ ಜ್ಞಾನೋದಯವಾಗುವುದನ್ನು ಪೂರ್ಣವಾಗಿ ಉತ್ಸವರೂಪದಲ್ಲಿ ನೋಡುವುದು ಕಣ್ಣಿಗೆ ಹಬ್ಬ. ತೈಮಾಸದಲ್ಲಿ ನಾಂಗೂರಿನ 11 ಕ್ಷೇತ್ರದ ಉತ್ಸವರು ಮಣಿಮಾಡ ಕೋಯಿಲ್‌ನಲ್ಲಿ ಸೇರುವರು

ಪೂರಿ ಚತುರ್ಧಾಮಗಳಲ್ಲಿ ಒಂದಾದ ಕ್ಷೇತ್ರ ಮತ್ತು ಜಗನ್ನಾಥನ ಲೀಲಾಸ್ಥಳ. ಮಧ್ಯೆ ತಂಗಿ ಸುಭದ್ರ ಇಕ್ಕೆಲಗಳಲ್ಲಿ ಅಣ್ಣ ಬಲರಾಮ ಮತ್ತು ತಮ್ಮ ಜಗನ್ನಾಥ, ಇವರುಗಳ ಪ್ರತ್ಯೇಕ ರಥಗಳಲ್ಲಿ ಗುಂಡೀಚಮಂದಿರಕ್ಕೆ ತೆರಳುವುದೇ ರಥಯಾತ್ರೆ. ಇಲ್ಲಿಯ ವಿಶೇಷವೇನೆಂದರೆ, ಮೂಲವರಿಗೆ ಮೆರವಣಿಗೆ. ಇಲ್ಲಿಯ ಬೃಹದ್ರಥಗಳು ಭಾರತದಲ್ಲೆಲ್ಲಿಯೂ ಕಂಡು ಬರುವುದಿಲ್ಲ. ಈ ರಥಯಾತ್ರೆಯಲ್ಲಿ (ಸರಾಸರಿ) 3 ಲಕ್ಷ ಭಕ್ತ ಜನರು ಸೇರುವರು.

ಆಚಾರ್ಯಮಧ್ವರ ಪೊಡವಿಗೊಡೆಯ ಕೃಷ್ಣನ ಸನ್ನಿಧಿಯಲ್ಲಿ ನಿತ್ಯವೂ ಒಂದಲ್ಲ ಒಂದು ಉತ್ಸವ ಇರುವುದು. ಇಲ್ಲಿಯ ಅತ್ಯಂತ ವೈಭವೋತ್ಸವ–ಸಪ್ತೋತ್ಸವ. 7 ದಿನಗಳ ಭವ್ಯ ಕಾರ್ಯಕಲಾಪಗಳು. ಆರನೆ ದಿನ ಮಕರಸಂಕ್ರಮಣದಂದು 3 ರಥೋತ್ಸವಗಳು ಜರುಗುವುವು. ಮಧ್ವನವಮಿಯಂದು ಬಲು ಸಡಗರ. ಬ್ರಹ್ಮೋತ್ಸವ, ಅನ್ನದಾನ, ವಿದ್ವತ್ ಸದಸ್ಸು, ವಿದ್ವತ್ ಸಂಭಾವನೆ, ಸಂಗೀತ, ನೃತ್ಯ ನಾಟಕ ಇತ್ಯಾದಿಗಳು ವೈಭವವನ್ನು ಎತ್ತಿ ತೋರಿಸುವುದು. ಪರ್ಯಾಯೋತ್ಸವ ಉಡಪಿಯ ವೈಶಿಷ್ಟ್ಯ. ಅಷ್ಟ ಮಠದಯತಿಗಳು ಸರದಿಯಂತೆ ಪ್ರತಿ 2 ವರ್ಷಕ್ಕೊಮ್ಮೆ ಕೃಷ್ಣನ ಪೂಜಾಧಿಕಾರವನ್ನು ವಹಿಸಿಕೊಂಡು ಪೂಜಾವಿಧಿಗಳನ್ನು ನಡೆಸಿಕೊಂಡು ಬರುವರು. ಇದರ ವ್ಯವಸ್ಥಾಪಕರು ವಾದಿರಾಜರು. ಪರ್ಯಾಯ 2 ವರ್ಷಕ್ಕೊಮ್ಮೆಯಾದರೆ ಪೂರ್ವಸಿದ್ಧತೆಗಳು ಸಹ 2 ವರ್ಷ ನಡೆಯುವುದು (ಅಕ್ಕಿ, ತರಕಾರಿ, ಬಾಳೆ ಎಲೆ ಮತ್ತು ಕಟ್ಟಿಗೆ ಸಂಗ್ರಹಣೆ) ಕಟ್ಟಿಗೆಯನ್ನು ತೇರಿನಾಕಾರದಲ್ಲಿ ಒಟ್ಟು ಗೂಡಿಸುವರು. ಈ ಕಟ್ಟಿಗೆ ರಥ ದೇವಸ್ಥಾನದ ಸಮೀಪದಲ್ಲಿದೆ.

# ದೀಪ ವೈವಿಧ್ಯ

ದೀಪ ಅಥವಾ ದೀವಿಗೆಯು ಕೇವಲ ಪ್ರಕಾಶಕ್ಕಾಗಿ ಮಾತ್ರ ಹೇಳುವ ಸೀಮಿತ ವಿಷಯವಲ್ಲ, ಆದರೆ ಕಲಾತ್ಮಕ, ಭಾವಾತ್ಮಕ ಮತ್ತು ಸಾಂಸ್ಕೃತಿಕ ಪಕ್ಷಕ್ಕೂ ಇದರ ಹರವುಂಟು. ಭಾರತೀಯ ಧಾರ್ಮಿಕ ಗ್ರಂಥಗಳಾದ ಮಹಾಭಾರತ, ರಾಮಾಯಣ, ವೇದ ಸಾಹಿತ್ಯ, ಕಲೆ–ಬೇಕಿದ್ದರೆ ಅದು ಶಿಲ್ಪ ಕಲೆಯಾಗಿರಲಿ ಅಥವಾ ಲೋಕಕಲೆಯಾಗಿರಲಿ -ಎಲ್ಲದರಲ್ಲಿಯೂ ಇದರ ಉಲ್ಲೇಖ ಬರುತ್ತದೆ. ದೀಪವು ಭಾರತೀಯ ಸಂಸ್ಕೃತಿಯ ಎಲ್ಲ ಮುಖಗಳನ್ನು(ಮಜಲುಗಳು) ಒಳಗೊಂಡಿದೆ ಎನ್ನುವುದರಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲ.



ನಮ್ಮ ಪ್ರಾಚೀನ ವೈದಿಕ ಗ್ರಂಥಗಳಲ್ಲಿ ದೀಪದ ಮಹತ್ವದ ಪ್ರತಿಪಾದನೆ ಮಾಡಲ್ಪಟ್ಟಿದೆ. ದೀಪವು ಮರಣಹೊಂದುವವರ ಮಧ್ಯದಲ್ಲೂ ಅಮರವು– 'ಅಯಂ ದೀಪಃ ಅಮೃತಂ ಮರ್ತ್ಯೇಷು'.

ಸ್ಕಂದ ಪುರಾಣದಲ್ಲಿಯೂ ದೀಪದ ಉಲ್ಲೇಖವಿದೆ– 'ಅಗ್ನಿ ಜ್ಯೋತಿ ರವಿಜ್ಯೋತಿ ಚಂದ್ರ ಜ್ಯೋತಿ, ಸ್ವಯ್ಯೈವ ಚ ಉತ್ತಮಮ್ ಸ್ವ ಜ್ಯೋತಿಷಾಮ್ ............... । ಅಂದರೆ (ಜ್ಯೋತಿ) ಅಗ್ನಿ ಜ್ಯೋತಿ, ಸೂರ್ಯ ಜ್ಯೋತಿ ಮತ್ತು ಚಂದ್ರಜ್ಯೋತಿ ಎಲ್ಲಕ್ಕಿಂತಲೂ ಉತ್ತಮವಾದದ್ದು ಈ ದೀಪವು.

ರಾಮಾಯಣ ಮತ್ತು ಮಹಾಭಾರತದಲ್ಲಿ ಚಿನ್ನದ ಮತ್ತು ಬಹುಮೂಲ್ಯ ಶಿಲೆಗಳ ದೀಪಗಳ ಉಲ್ಲೇಖ ಸಿಗುತ್ತದೆ. ವಾಲ್ಮೀಕಿ ರಾಮಾಯಣದ ಸುಂದರ ಕಾಂಡದಲ್ಲಿ ಲಂಕೆಯ ವರ್ಣನೆ ಮಾಡುತ್ತಾ ರತ್ನ ದೀಪದ ಉಲ್ಲೇಖ ಮಾಡಲಾಗಿದೆ. ರಾಮಾಯಣದ ಪಂಚಮಸರ್ಗದಲ್ಲಿ ಲಂಕೆಯಲ್ಲಿ ಮಂದಜ್ಯೋತಿಯಿಂದ ಉರಿಯುತ್ತಿರುವ ದೀಪಗಳ ಕಲ್ಪನೆಯನ್ನು ಸೋತ ಜೂಜುಗಾರರ್ಥ್ಯಚಿತೆಗೆ ಹೋಲಿಸಲಾಗಿದೆ. ತುಲಸೀಕೃತ ರಾಮಚರಿತಮಾನಸದ ಬಾಲಕಾಂಡದಲ್ಲಿ ಸೀತೆಯ ಸೌಂದರ್ಯವನ್ನು ದೀಪದ ಕುಡಿಗೆ ಹೋಲಿಸಲಾಗಿದೆ:

ಸುಂದರತಾ ಕಹು ಸುಂದರ ಕರ ಈ
ಛವಿ ಗೃಹ ದೀಪಸಿಖಾ ಜನು ಬರ ಈ

ಅಂದರೆ ಸೀತೆಯು ಸೌಂದರ್ಯಕ್ಕೆ ಸೌಂದರ್ಯ ಕೊಡುವವಳು. ಅವಳು ಈ ರೀತಿ ತಿಳಿಯಲ್ಪಟ್ಟಿದ್ದಾಳೆ – ಹೇಗೆಂದರೆ ಸೌಂದರ್ಯ ರೂಪದ ಮನೆಯಲ್ಲಿ ದೀಪದ ಕುಡಿ ಉರಿಯುವಂತೆ. ಇಲ್ಲಿಯವರೆಗೆ ಸೌಂದರ್ಯರೂಪಿ ಮನೆಯಲ್ಲಿ ಕತ್ತಲೆ ಇತ್ತು. ಅದು ಸೀತಾರೂಪೀ ಸೌಂದರ್ಯವನ್ನು ಪಡೆದು ಮತ್ತಷ್ಟು ಸುಂದರವಾಯಿತು. ರಾಮಚರಿತಮಾನಸದ ಬಾಲಕಾಂಡದಲ್ಲಿ ಮಣಿದೀಪದ ಮನೋಹರ ಉಲ್ಲೇಖವೂ ದೊರಕುತ್ತದೆ.

ವೇದವ್ಯಾಸರು ಮಹಾಭಾರತದ ದ್ರೋಣ ಪರ್ವದಲ್ಲಿ ದೀಪಗಳ ಬೆಳಕಿನಿಂದುಂಟಾದ ಚಲ, ಕಪಟ ಹಾಗೂ ರೋಮಾಂಚಕಾರೀ ಯುದ್ಧದ ವರ್ಣನೆಯನ್ನು ಮಾಡಿದ್ದಾರೆ. ನಂತರ ಆನೆ ಮತ್ತು ಕುದುರೆಗಳ ಮೇಲೆ ಇಡಲ್ಪಟ್ಟ ದೀಪಗಳನ್ನು ಉಲ್ಲೇಖಿಸಿದ್ದಾರೆ. ಮುಂದೆ ಯಕ್ಷ, ಗಂಧರ್ವ, ಕಿನ್ನರ ಹಾಗೂ ಸ್ವರ್ಗಲೋಕವಾಸಿಗಳಿಂದ ಹಿಡಿದು ಇಲ್ಲಿಯವರೆಗಿನ ದೇವತೆಗಳೂ ರತ್ನ ದೀಪದ ಬೆಳಕಿನಲ್ಲಿ ಈ ಅದ್ಭುತ ಯುದ್ಧವನ್ನು ನೋಡುತ್ತಿದ್ದರು ಎನ್ನುವರು. ಮಹಾಭಾರತದಲ್ಲಿ ಮಯನ ಮೂಲಕ ನಿರ್ಮಿತವಾದ ಪಾಂಡವರ ಅರಮನೆಯಲ್ಲಿ ಗುಪ್ತ ಬೆಳಕು ಹತ್ತಿಸಿ, ಅವರು ಕೌರವರನ್ನು ದಡ್ಡರನ್ನಾಗಿಸಿದ ಉಲ್ಲೇಖ ಬರುತ್ತದೆ.

ಮಹಾಕವಿ ಕಾಳಿದಾಸ ವಿರಚಿತ ಸಂಸ್ಕೃತ ಕಾವ್ಯದಲ್ಲಿ ದೀಪದ ಉಲ್ಲೇಖ ಅನೇಕ ಸಲ ಬಂದಿದೆ. ರಘುವಂಶದ ೬ನೇ ಸರ್ಗದಲ್ಲಿ ಇಂದುಮತಿಯ ಸ್ವಯಂವರ ವರ್ಣನೆ ಮಾಡುವಾಗ,

ಸಂಚಾರಿಣೀ ದೀಪಶಿಖೇವ ರಾತ್ರೌ ।
ಯಂ ಯಂ ವ್ಯತೀಯಾಯ ಸಾ
ಪತಿಂವರಾ ಸಾ ॥

ಇಂದುಮತಿ ಸ್ವಯಂವರದಲ್ಲಿ ದೀಪದ ಕುಡಿಯಂತೆ ಅತ್ತ-ಇತ್ತ ವಿಚಾರಣೆ ಮಾಡುತ್ತಿದ್ದಳು. ಅವಳು ಬಂದಾಗ ಸ್ವಯಂವರದಲ್ಲಿ ಉಪಸ್ಥಿತರಿದ್ದ ಎಲ್ಲ ರಾಜರುಗಳ ಮುಖ ದೇದೀಪ್ಯಮಾನವಾಯಿತು. ಅವಳು ಹೊರಟು ಹೋದಾಗ ಎಲ್ಲೆಡೆಯೂ ಕತ್ತಲೆ ಯಾವರಿಸಿತು.

(26 ನೇ ಪುಟ ನೋಡಿ)

ಶ್ರೀಮತಿ ಕಲ್ಯಾಣಿಮೂರ್ತಿ

# ಕನ್ನಡ ಸಾಹಿತ್ಯದಲ್ಲಿ ಸಂಗೀತ

ಕರ್ನಾಟಕದಲ್ಲಿ ಸಂಗೀತವು ಸಾವಿರಾರು ವರ್ಷಗಳಿಂದ ಬಹು ವಿಪುಲವಾಗಿ ಬೆಳೆದು ಅದಕ್ಕೆ ಸಂಬಂಧಪಟ್ಟ ಶಾಸ್ತ್ರ ಅಥವಾ ಲಕ್ಷಣಗ್ರಂಥಗಳು ಅಸಂಖ್ಯಾತವಾಗಿ ರಚಿತವಾಗಿವೆ. ಅವೆಲ್ಲವೂ ಸಂಸ್ಕೃತ ಭಾಷೆಯಲ್ಲಿಯೇ ರಚಿತವಾಗಿದೆ. ಕನ್ನಡಿಗರು ಸಂಗೀತಪ್ರಿಯರು, ಸಂಗೀತ ವಿದ್ವಾಂಸರು ಮತ್ತು ಅದಕ್ಕೆ ಪ್ರೋತ್ಸಾಹಿಗಳೂ ಆಗಿದ್ದಾರೆ. ಕನ್ನಡದಲ್ಲಿಯೂ ಸಂಗೀತ ವಿಷಯಕವಾದ ಪಾರಿಭಾಷಿಕ ಶಬ್ದಗಳು ವಿಶೇಷವಾಗಿ ಸಿಕ್ಕುತ್ತವೆ. ಆದರೂ ಕನ್ನಡ ಭಾಷೆಯಲ್ಲಿ ಸಂಗೀತಶಾಸ್ತ್ರ ವಿಷಯಕವಾದ ಯಾವ ಲಕ್ಷಣ ಗ್ರಂಥಗಳು ಸಿಕ್ಕದಿರುವುದು ನಿಜವಾಗಿಯೂ ಆಶ್ಚರ್ಯಕರ. ಕನ್ನಡಿಗರು ತಮ್ಮ ಸಂಗೀತ ಜ್ಞಾನವನ್ನು ಸಂಸ್ಕೃತ ಲಕ್ಷಣ ಗ್ರಂಥಗಳ ಆಧಾರದಿಂದಲೇ ಅಭ್ಯಾಸಮಾಡಿದರೆಂದು ಭಾವಿಸುವುದು ಸರಿಯಲ್ಲ. ಕನ್ನಡದ ಆದಿಕಾಲದಿಂದ ಕನ್ನಡದ ಕವಿಗಳೆಲ್ಲರೂ ತಮ್ಮ ಕಾವ್ಯಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸಂಗೀತ ವಿಷಯಕವಾದ ಶಾಸ್ತ್ರಜ್ಞಾನವನ್ನು ವಿಶೇಷವಾಗಿ ಪ್ರದರ್ಶಿಸಿದ್ದಾರೆ. ಅವರು ರಚಿಸಿರುವ ಅನೇಕ ಪಾರಿಭಾಷಿಕ ಶಬ್ದಗಳೂ ರಾಗ ತಾಳ ಮತ್ತು ವಾದ್ಯಗಳ ಮೂಲಗಳು ಸಂಸ್ಕೃತ ಸಂಗೀತ ಲಕ್ಷಣ ಗ್ರಂಥಗಳಲ್ಲಿ ಸಿಕ್ಕಲಾರವು. ಆದುದರಿಂದ ಕನ್ನಡ ಭಾಷೆಯಲ್ಲಿಯೂ ಸಂಗೀತಶಾಸ್ತ್ರ ವಿಷಯಕವಾದ ಲಕ್ಷಣಗ್ರಂಥಗಳಿರಬೇಕೆಂಬ ಸಂಶಯವು ಬಂದೇ ಬರುತ್ತದೆ. ಅದನ್ನು ಸಿದ್ಧಪಡಿಸುವುದಕ್ಕೆ ಕನ್ನಡದ ಆದಿಕಾಲದ ಸಾಹಿತ್ಯದಿಂದ ಇಂದಿನವರೆಗೆ ಪರಿಚಿತವಾಗಿರುವ ಅನೇಕ ಕಾವ್ಯಗಳನ್ನು ಪರಾಮರ್ಶಿಸಬಹುದು.

ಈಗ ನಮಗೆ ಕನ್ನಡ ಸಾಹಿತ್ಯದಲ್ಲಿ ೧೦ನೆಯ ಶತಮಾನದಲ್ಲಿ (ಕ್ರಿ. ಶ. 945) ಬರೆಯಲ್ಪಟ್ಟ 'ಆದಿಪುರಾಣ'ವೇ ಮೊತ್ತಮೊದಲನೆಯ ಕಾವ್ಯ ದ್ರಾವಿಡ ಭಾಷೆಗಳಲ್ಲಿ ಗ್ರಂಥದ ರಚನೆ ಮಾಡಿದವರು ಜೈನರೇ ಮೊತ್ತಮೊದಲಿಗರು. ಆದರೆ ಈ 'ಆದಿಪುರಾಣ'ಕ್ಕೆ ೫೦-೬೦ ವರುಷಗಳ ಹಿಂದೆ ಬರೆಯಲ್ಪಟ್ಟಿರುವ 'ಕವಿರಾಜ ಮಾರ್ಗ'ದಲ್ಲಿ ಕನ್ನಡ ಭಾಷೆಯ ಹಲವು ಗದ್ಯಗ್ರಂಥಗಳೂ ಪದ್ಯ ಗ್ರಂಥಗಳೂ ಇದ್ದಂತೆ ಹೇಳಿರುವನು. ಅವೊಂದೂ ಇದುವರೆಗೆ ಲಭ್ಯವಾಗಲಿಲ್ಲ.

ಈ 'ಆದಿಪುರಾಣ'ವು ಜೈನ ಮತೀಯರಿಂದ ಸ್ವೀಕರಿಸಲ್ಪಟ್ಟಿರುವ ೨೪ ಮಂದಿ ತೀರ್ಥಂಕರರಲ್ಲಿ ಮೊದಲನೆಯ ತೀರ್ಥಂಕರನ ಪಂಚಕಲ್ಯಾಣಗಳನ್ನು ವಿವರಿಸುವುದು. ಈ ಜೈನ ಪುರಾಣಗಳಲ್ಲಿ ಜಿನಜನನಿಗೆ ಜಿನನು ಆಕೆಯ ಗರ್ಭದಲ್ಲಿ ಸ್ವರ್ಗದಿಂದ ಬಂದು ನೆಲೆಸುವುದಕ್ಕೆ ಮೊದಲು ದೇವೇಂದ್ರನು ಆಕೆಯ ಗರ್ಭಶೋಧನೆಗಾಗಿ ದೇವಸ್ತ್ರೀಯರನ್ನು ಕಳುಹಿಸುವನು. ಅವರು ಜಿನಜನನಿಯನ್ನು ಸಂಗೀತ, ನಾಟ್ಯ, ವೀಣೆಗಳಿಂದ ಸಂತೋಷಪಡಿಸುತ್ತಿದ್ದರು ಎಂಬ ಪ್ರಕರಣದಲ್ಲಿ ಸ್ವಲ್ಪಸ್ವಲ್ಪ ಸಂಗೀತ ನಾಟ್ಯವೀಣಾವಾದ್ಯಗಳ ವಿವರಣೆಯಿದೆ.

(ಆದಿಪುರಾಣ ಆಶ್ವಾಸ ೭ ಪದ್ಯ ೧೬ ರಿಂದ ಈ ಸಂಗೀತಕ ವಿಚಾರವು ಸಂಗ್ರಹವಾಗಿ ಹೇಳಲ್ಪಟ್ಟಿದೆ.)

ಗಮಕಂ ಪ್ರಯೋಗಮಾಭೋ।
ಗಮಲಂಕಾರಂ ಪೊಗರ್‌ನಯಂ
ಮಿಱಗು ಪೊದ॥
ಳ್ದಮರ್ದಿರೆ ಕೊಳಲೂಡುವಮರಿದ।
ಳಿಮರ್ದಂ ಮುಕ್ಕುಳಿಸಿಯುಗಳ್ವ
ತೆರನಂ ಪೋಲ್ತಳ್॥
ಜೇನಮರೆ ಕೊಂಡುದಮರ್ದಿನ।
ಸೋನೆಯ ಸಂಪತ್ತು ರಸದ
ತೊರೆ ಪರಿದತ್ತೆಂ॥
ಬೀ ನುಡಿಯನೆ ನುಡಿಯಿಸಿದ।
ತ್ತಾ ನಾಕಸ್ತ್ರೀಯ ಗೇಯಮಾ-
ಸ್ಥಾಯಿಕೆಯೊಳ್॥

ಕೊರಲಂ ನಿಟ್ಟೆಗೆ ತಂದು ವಂಶಶ್ರುತಿಯಿಂ
ತ್ರಿಸ್ಥಾನ ಸಂಶುದ್ಧಿವೆ।
ತ್ತಿರೆ ನಾನಾವಿಧದಿಂ ಪ್ರಯೋಗಿಸುವು
ಪಾಂಗಂಗಳ್ ರಸಂಬೆತ್ತುಬಿ॥
ತ್ತರಿಪಂತಾಣತಿ ಮಾಡಿದಂ ಮುಖರಿಗಾಣಂ
ಭೃಂಗಮಾಳಾ ಮೃದು।
ಸ್ವರಮಲ್ಲಿಂತಿದು ಕಾಮಕಾಮುರ್ಕ
ಲತಾಜ್ಯಾರಾವವೆಂಬನ್ನೆಗಂ॥

ಅಂತಾದತಿಶಯ ಪರಿಣತಿಯಂ ಮೆರೆದು ಮೂರುಂ ಗ್ರಾಮ ರಾಗಂಗಳೊಳಂ ಷಡ್ಜಾರ್ಷಭಾದಿ ಸಪ್ತಸ್ವರ ಸಮಾಯೋಗ ಸಂಭವಮಪ್ಪ ಮೂವತ್ತುಂ ವಿಶುದ್ಧ ರಾಗದೊಳಂ ಸ್ವರ ಭಾಷಾ ವಿಭಾಷೆಯಿಂ ವ್ಯಕ್ತಮಾದ ಮೂವತ್ತಾರುಂ ರಾಗಭೇದದೊಳಂ ದೇಶೀಯ ವಿಶೇಷಭೇದದಿನಾಚಾರ್ಯ ವಿರಚಿತಾಭಿನಯ ಭೇದದಿಂ ಜನಿಯಿಸಿದ ನೂರು ನಾಲ್ವತ್ತುಂ ರಾಗ ಭೇದದೊಳಂ, ಚಚ್ಚಪುಟ ತಾಳಪುಟಾದಿ ಸಕಳ ತಾಳ ಸಂಚಾರ ಸಮುದಿತಮಪ್ಪ ಇರ್ಪತ್ತೆಂಟು ವಸ್ತು ಗೀತದೊಳಂ ಪ್ರವೀಣನಪ್ಪ ಗಾಣಂ ಪಾಡಲೊಡರಿಸುವುದುಮಾಗಳ್,

—ಇದರಲ್ಲಿ ಮೂರು ಗ್ರಾಮ, ಷಡ್ಜಾರ್ಷಭಾದಿ ಸಪ್ತಸ್ವರ ಸಮಾಯೋಗ, ಇವುಗಳಿಂದ ಹುಟ್ಟುವ ಮೂವತ್ತು ಶುದ್ಧ ರಾಗಗಳಿಂದೂ, ಸ್ವರಭಾಷಾವಿಭಾಷೆ (ವಿಕಲ್ಪದಿಂ)ಯಿಂದ ಮೂವತ್ತಾರು ರಾಗಭೇದಗಳಿಂದೂ, ದೇಶೀಯ ವಿಶೇಷ ಭೇದದಿಂದ ನೂರು ನಾಲ್ವತ್ತು ರಾಗಭೇದಗಳಿಂದೂ, ಅವುಗಳನ್ನು ಒಂದೊಂದರಲ್ಲಿ ಬೆರೆಯಿಸುವುದರಿಂದ ಹುಟ್ಟುವವು ಸಾಮಾನ್ಯ ಭೇದಗಳು ಎಂದೂ ಹೇಳಿ, ಚಚ್ಚಪುಟ ಮೊದಲಾದ ತಾಳಭೇದಗಳನ್ನೂ ಹೇಳಿರುವುದಲ್ಲದೆ, ದೇಶೀಯ ವಿಷಯವನ್ನೂ ಸ್ವಲ್ಪ ಸೂಚಿಸಿರುವನು.

ಈ ಎರಡು ಪದ್ಯಗಳಲ್ಲಿ ಪ್ರಾಚೀನ ಕಾಲದ ಗೇಯದ ಸ್ವರೂಪವನ್ನು ವಿವರಿಸಿರುವನು. ಗಮಕ, ಪ್ರಯೋಗ, ಆಭೋಗ, ಅಲಂಕಾರ, ಪೊಗರ್ (ಕಾಂತಿಯೆಂಬ ಗುಣ) ನಯ, ಮಿಱುಗು ಈ ಶಾಸ್ತ್ರೀಯ ಪದಗಳ ಅರ್ಥ ವಿವರಣೆಯು ವಿಮರ್ಶಿಸಬೇಕಾಗಿದೆ. ಮುಂದೆ ನಾಟ್ಯ ಮತ್ತು ವೀಣಾ ವಾದ್ಯಗಳ ವರ್ಣನೆಯೂ ಇದೆ. ೧೧ನೆಯ ಶತಮಾನದ ಆದಿಭಾಗದಲ್ಲಿ ವಿರಚಿತವಾದ ಮಲ್ಲಿನಾಥ ಪುರಾಣದಲ್ಲಿ—

ಡಾ|| ಎನ್. ಅನಂತರಂಗಾಚಾರ್

ಅದರಲ್ಲಿಯೇ

ಮತ್ತಂ ಶಾರೀರವೀಣೆಯೊಳ್ ಪಾಡುವಲ್ಲಿ-
ಸ್ವರದೊಳ್ ತಾಳದೊಳವ.........
......ಧಾನದೊಳಳಂಕೆಗೊಂಡಿರೆ ರಾಗೋ ॥
ಚ್ಚರಣಲಯ ಮಾಯ್ತು
ಚ್ಚರಿ ತತ್ಗಂಧರ್ವ ವಿದ್ಯೆ ಸುರಸುಂದರಿಯಾ ॥
ಅಮರ್ದಿನ ಕೊಳಲಿನಿಯದೆನೆ
ಸಮಂತು ಸಪ್ತಸ್ವರಂಗಳುಂ ರಂಜಿಪ ರಾ ॥
ಗಮನುಗುರೆ ಕೊಳಲನೂಡಿಸಿದ।
ಳಮರಾಂಗನೆ ಬಿಲ್ಲಿನತನು ಗೊಲೆಗೊತ್ತುವಿನಂ॥

ಮತ್ತು ೧೨ನೆಯ ಶತಮಾನದಲ್ಲಿ ಬರೆಯಲ್ಪಟ್ಟ ನೇಮಿಚಂದ್ರನ ಅರ್ಧನೇಮಿ ಪುರಾಣದಲ್ಲಿ-

ರಸಮಂ ಸೂಸೆ ಮಹೇಂದು ಕಯ್
ಮದನನಂ ಕೈವೀಸೆ ಬೆಳ್ದಿಂಗಳಂ।
ಪೊಸತಂ ಪುಟ್ಟಿಸೆ ದೃಷ್ಟಿ ನೃತ್ಯ ಪೊಳೆವ
ಮಿಂಚಂ ಪೋಲೆ ಚೆಲ್ವಾಗೆ ಬ ॥
ಣ್ಣ ಸರಂ ಕಾಳ್ಪುರವೇರೆ ಕಾಕಳಿ
ನಭೋರಂಗಾಗ್ರದೊಳ್ ನಿಚ್ಚಲಾ।
ಡಿಸುವಂ ಪಾಡಿಸುವಂ ವಿಯಚ್ಚರಿ
ಯರಂ ವಾಗ್ಗೇಯವಿದ್ಯಾಧರಂ ॥

ಇದರಲ್ಲಿ "ವಾಗ್ಗೇಯ"ವೆಂಬ ಬಾಯಿ ಹಾಡುಗಾರಿಕೆಯ ವಿಷಯವನ್ನು ಸೂಚಿಸಿದೆಯಲ್ಲದೆ ಅದನ್ನು ನಾಟ್ಯಾಂಗವಾಗಿಯೇ ಹೇಳಿದೆ.

ತಾಳಮನಿತ್ತು ಸಮ್ಮನಿಪದೊತ್ತುವ
ಬಂಚದ ನುಚ್ಚುರಕಣಂ।
ಮೇಳತೆಯಿಲ್ಲ ಬೀಣೆಯ ಸರಂ
ಬಿಡದಿಲ್ಲಿಯೆ ನಿಪ್ಪ ಠಾಯಿಯಿಂ ॥
ದಾಳತಿ ಮಾಡಿ ಸಾಳಗದ ದೇಸಿಯ
ಗೀತಮನಂದು ಹಾಡುವಿಂ।
ಪಾಣನನುರ್ವರಾಧಿಪತಿ ಲೀಲೆಯ
ನೆಕ್ಕಲಗಾಣ ಗೊರ್ವನಂ ॥

ಈ ಪದ್ಯದಲ್ಲಿ ಠಾಯಿ, ಆಳತಿ, ಸಾಳಗ ಮುಂತಾದ ಶಾಸ್ತ್ರೀಯ ಪದಗಳನ್ನು ಹೇಳಿ, ದೇಸೀಯ ಗೀತ ವಿಷಯವನ್ನೂ ಸೂಚಿಸಿರುವನು

(ಕ್ರಿ.ಶ.) ೧೨೪೫ ರಲ್ಲಿ ರಚಿತವಾದ ಕಾವ್ಯಾವಲೋಕನವೆಂಬ ಕನ್ನಡ ಅಲಂಕಾರಗ್ರಂಥವು ರುದ್ರಟ ವಾಮನ ಮೊದಲಾದವರ ಅಲಂಕಾರ ಗ್ರಂಥಗಳ ಆಧಾರದಿಂದ ಬರೆಯಲ್ಪಟ್ಟಿದ್ದು; ಇದರ ಕೊನೆಯಲ್ಲಿ ಕನ್ನಡ ಕಾವ್ಯಗಳ ಲಕ್ಷಣವನ್ನು ಹೇಳುವ ಪ್ರಕರಣದಲ್ಲಿ-

ಸಂದಿಸಿರೆ ಕಂದಮುಂ ಪೆರ
ತೊಂದರಿಕೆಯ ವೃತ್ತ ಜಾತಿಯುಂ
ಪದಮುವು ತ ॥
ಳ್ತೊಂದಿರೆ ಪನ್ನೆರಡುವರಂ।
ಸಂದುದು ಮೆಲ್ವಾಡೆನಿಕ್ಕುಮದು
ಕನ್ನಡದೊಳ್ ॥
ಪದಮುಯು ಮಿರ್ದತಯುಂ।
ಪದಂ ಯಥಾಸಂಭವಂ
ಪ್ರಬಂಧದ ಮೆಯ್ಯೊಳ್ ॥
ಪುದಿದೊದವಿ ನೆಗಳ್ದುಡಂತದು।
ಸದಲಂಕಾರಂ ರಸಾಸ್ಪದಂ ಪಾಡಾಕ್ಕುಂ ॥

ಪಾಡುಗಳಿಂ ತರಿಸಲೆ।
ಮಾಡಿದುದಂ ಪಾಡುಗಬ್ಬವೆಂದು
ಬುಧರ್ ಕೊಂ
ಡುಡುವರದರಿಂ ದಲ್ ಮೆ।
ಲ್ವಾಡುಂ ರೂಢಿಯ ಬೆದಂಡೆ
ಗಬ್ಬಮುಮಕ್ಕುಂ

ಎಂದು ಹಾಡುಗಬ್ಬ, ಮೆಲ್ವಾಡು ಎಂಬ ಹಾಡುಗಾರಿಕೆಯ ಕಾವ್ಯಗಳ ಹೆಸರನ್ನು ಹೇಳಿರುವನು ಆ ಬಗೆಯ ಕಾವ್ಯಗಳೊಂದೂ ಇದುವರೆ ದೊರೆತಿಲ್ಲ.

ಮತ್ತು ೧೩ನೆಯ ಶತಮಾನದ ಆದಿಭಾಗದ ರಚಿತವಾದ ಯಶೋಧರ ಚರಿತ್ರೆಯಲ್ಲಿ-

ಗಹಗಹಿಕೆವಡೆದ ವಹಣಿಯ।
ಸಹಾಹೆ ಝುಂಪೆಯದೊಳಮರಿ
ಠಾಯದೊಳಂ ನಿ
ರ್ವಹಿಸಿ ನೆಲೆಗೊಳಿಸೆ ಬಯ್ಕೆ (ಬಯಸಿಕೆ)।
ಮಹಚಾಳಯದಲ್ಲಿ ಮೂರ್ತಿವಡೆದುದು
ರಾಗಂ
ಮಾಳಿಗೆಯೊಳಗಣ ಸೊಡರ್ಗುಡಿ।
ಥಾಳಂ ಬಡೆವಂತೆ ರಾಗರಕ್ತಿಯೊಳಮರ್ದ
ಪಾಳಿಕೆವಡೆದು ಬಜಾವಣೆ।
ಮಾಳವ ಸಿರಿಯೆಂಬ ರಾಗಮಂ ಚಾಳಿಸಿದಂ
ತಾಳದ ಲಯಮಂ ನೆನೆಯದೆ।
ಕೇಳಲೊಡಂ ಠಾಯೆ ಜಾತಿಯೊಳ್
ಗ್ರಾಹ (ಮ?) ಯುತಂ
ಕೇಳಲೊಡಂ ಗೀತಮನೆಂ।
ದಾಳತಿಯೊಳ್ ಮರೆದು ಪಾಡಿದಂ
ರೂಪಕಮಂ
ಅಂತೆಸೆದು ಪಾಡುತಿರೆ............

ಈ ಮೂರು ಪದ್ಯಗಳಲ್ಲಿ ಸಂಗೀತ ಶಾಸ್ತ್ರೀ ಪದಗಳು ಹೆಚ್ಚಾಗಿವೆ. ಮೊದಲನೆಯ ಪದ್ಯದ 'ಗಹಗಹಿಕೆ'ಯನ್ನು ಪಡೆದ ವಹಣಿ ಸಹಾಯೆಯು ಝುಂಪೆಯಲ್ಲಿ ಸೇರಿರಲು ಠಾ ಯಲ್ಲಿ ನಿರ್ವಾಹ ಮಾಡಿ ನೆಲೆಗೊಳಿಸ (ರಾಗವು ಬಯ್ಸಿಕೆ ನೆಲೆಗೊಳಿಸೆ), ಮಹಚಾಳೆ ದಲ್ಲಿ ರಾಗವು ಆಕಾರವನ್ನು ಪಡೆದ ತೋರುತ್ತಿತ್ತು" ಎಂಬ ವಹಣಿ, ಸಹಾಹೆ, ಝು ಮೊದಲಾದ ಪದಗಳ ಅರ್ಥವಿವರಣೆಯು ಸ್ಪ ವಾಗುವುದಿಲ್ಲ.

ಎರಡನೆಯ ಪದ್ಯದಲ್ಲಿ – ಮಾಳಿಗೆಯೊಳಗಿರ ದೀಪದ ಕುಡಿಯು ಚೆನ್ನಾಗಿ ಪ್ರಕಾಶಿಸುವ ರಾಗರಕ್ತಿಯಲ್ಲಿ ಅಮರ್ದುಂ? ಬಜಾವಣೆ ಪಾಳಿಕೆವಡೆದು ಮಾಳವಸಿರಿ (ಶ್ರೀ) ಎಂಬ ರಾ ವನ್ನು ಆಲಾಪನೆ ಮಾಡಿದನು– ಎಂದು ರಾ ವಿಚಾರವನ್ನೇ ಹೇಳಿರುವನು.

ಮೂರನೆಯದರಲ್ಲಿ – ತಾಳದ ಲಯವ ಆತನು ನೆನೆಯದೆ ಕೇಳಿದೊಡನೆಯೇ ಠಾ

ಜಾತಿಯಲ್ಲಿ ಗ್ರಾಹ (ಮ) ದಿಂದ ಕೂಡಿದುದಾಗಿ ಗೀತವನ್ನು ಕೇಳಿದೊಡನೆ ಆಳತಿಯಲ್ಲಿ (ಆಲಾಪನೆ ಯಿರಬಹುದು) (ವ್ಯೆ) ಮರೆತು ರೂಪಕವನ್ನು ಹಾಡಿದನು– ಎಂದು ಠಾಯೆ, ಜಾತಿ, ಗ್ರಾಮ (ಹ), ಆಳತಿ ಎಂಬ ಸಂಗೀತ ಶಾಸ್ತ್ರೀಯ ಶಬ್ದಗಳನ್ನು ಪ್ರಯೋಗಿಸಿರುವನು. ಒಂದು ಪ್ರಾಚೀನ ಸಂಗೀತಶಾಸ್ತ್ರದ ಆಧಾರವಿಲ್ಲದೆ ಇವನ್ನು ವಿವರಿಸಲು ಶಕ್ಯವಿಲ್ಲ.

೧೪-೧೫ ಶತಮಾನಗಳಲ್ಲಿ ಜೈನರಲ್ಲಿ ಚಂಪೂ ರೂಪವಾದ ಪುರಾಣ ರಚನೆಯು ನಿಂತು ಹೋಯಿತು. ಬಳಿಕ ೧೬ನೆಯ ಶತಮಾನದಲ್ಲಿ ಸಾಂಗತ್ಯ ಗ್ರಂಥಗಳು ವಿಶೇಷವಾಗಿ ರಚಿತವಾದುವು. ಇವೂ ಒಂದು ಬಗೆಯ ಹಾಡಿನಂತಹ ಸಾಹಿತ್ಯವೆಂದೇ ಹೇಳಬಹುದು.

೧೬ನೆಯ ಶತಮಾನದಲ್ಲಿ ರಚಿತವಾದ 'ಭರತೇಶವೈಭವ'ವೆಂಬ (ಕ್ರಿ. ಶ. ೧೫೫೭) ಸಾಂಗತ್ಯ ಗ್ರಂಥದಲ್ಲಿ ಭರತನ ಸಭೆಯಲ್ಲಿ ಗಾಯಕರು ಸಂಗೀತವನ್ನು ಹಾಡಿದರೆಂದು ಆ ಸಂಗೀತ ಕ್ರಮವನ್ನು ವಿವರಿಸಿರುವನು. ಇದರಿಂದ ಆ ಶತಮಾನದ ಸಂಗೀತ ಪ್ರಕಾರವು ಸ್ವಲ್ಪ ಮಟ್ಟಿಗೆ ತಿಳಿದು ಬರುವುದು–

ನೋಡುತಿರ್ದರು ತನ್ನನೆಲ್ಲರು ಠಾನಾಗ
ನೋಡಿದನೊಲ್ದು ಗಾಯಕರ ॥
ನೋಡಿದ ಬಗೆಯರಿದಾ ಜಾಣರಾಗಳೆ
ಹಾಡತೊಡಗಿದರೋಜೆಯೊಳು ॥

ಗಾಯಕರ ಬಿರುದುಗಳು–

ರೋಮಾಂಚನಸಿದ್ಧ ಜುಂಜುಂಮಾಲಪ ಗಾ
ನಾಮೋದ ಚುಂಚುಮಾಲಾದ್ಯ (ದಿತ್ಯ) ॥
ಶ್ರೀಮಂತ್ರ ಗಾಂಧರ ರಾಗನರ್ಣಕರೆಂಬ
ರಾ ಮಹೀಪತಿಯ ಗಾಯಕರು ॥

ಸಂಗೀತಗಾರನಿಗೆ ಹಾಡುವಾಗ ಇರಬೇಕಾದ ಸ್ಥಿತಿ-

ಬಳ್ಳಬಾಯ್ದೆರೆಯದೆ ಭ್ರಾಂತುಗೊಂಡಂತೆ ವ್ಯೆ।
ಯೆಲ್ಲ ತೂಗಾಡದೊಂದಿನಿಸು ॥
ಅಲ್ಲಾಟವುಂಟು ಓಜೆವಿಡಿದು
ಬಾಯ್ದೆರೆಯುಂಟು ।
ಸಲ್ಲಲಿತದೊಳು ಹಾಡಿದರು ॥
ತಬ್ಬಿಬ್ಬಿಯಾಗದೆ ತಳ್ಳಂಕಗೊಳ್ಳದೆ
ಬೊಬ್ಬೆಯಿಕ್ಕದೆ ಜೋಕೆಯರಿದು ॥
ಒಬ್ಬರಿಬ್ಬರು ಮೂವರೊಂದೊಂದು
ಕಲೆಯ ವ್ಯೆ
ಯುಬ್ಬುವೋಲು ಕೇಳಿಸಿದರು ॥

ಉದಯರಾಗ ಹಾಡಿದುದು–

ಜೋಲಿಮಾಡದೆ ಜೋಕೆವಿಡಿದುರೆ ಪ್ರಾತಃ
ಕಾಲದ ರಾಗವನರಿದು ॥
ಆಳಾಪಿಸಿದರು ಕೇಳುವ ಜನರೆದೆ ತಂ
ಗಾಳಿ ಬೀಸಿದ ತೆರನಾಗೆ ॥

ರಾಗಾಲಾಪನೆ–

ಜೋಡು ಜೋಡಾಗಿ ತಾವರೆಯಿದಿರೊಳು ಸರ
ಮಾಡುವ ತುಂಬಿಗಳಂತೆ ॥
ನೋಡುತ ಭರತರಾಜನ ಮುಖಪದ್ಮವ
ಮಾಡಿದರಾಳಾಪಗಳನು ॥

ರಾಗಗಳ ಹೆಸರುಗಳು–

ಭೂಪಾಳಿಯಿಂದ ಧನ್ಯಾ (ನ್ಯಾ)ಸಿ
ಯಿಂದಾ ಸರ್ವ
ಭೂಪಾಳಿಗೊಡೆಯನ ಮುಂದೆ ॥
ಶ್ರೀಪುರುನಾಥನ ಪಾಡಿದರೆಲ್ಲರ
ಪಾಪಲೋಪವನೈದುವಂತೆ ॥
ಮಲಿನವಿಲ್ಲದಾ ಮನದಿಂದ ನಿಷ್ಕಲನ ನಿ
ರ್ಮಲನ ನಿತ್ಯನನಾದಿಜಿನನ ।
ಮಲಹರಿಯಿಂದ ಪಾಡಿದರು ಕೇಳ್ವರ ಕರ್ಮ
ಮಲವೆಲ್ಲ ಹರಿವಂತೆ ॥
ದೇಶಾಕ್ಷಿಯಿಂದ ಜಿನೇಶನ ಗುಣಗಳ
ದೇಶಾಧಿಪತಿ ಮೆಚ್ಚಿ ಹಾಡಿ ।
ಕೌಶಲ ಮಂಗಳಾಷ್ಟಕವನ್ನು ಮಂಗಳ
ಕೌಶಿಕೆಯಿಂದ ಹಾಡಿದರು ।
ದಂಡಿಗೆಗಳ ಶ್ರುತಿ ದಂಡಿದಂಡಿಗೆ ಹೋಗದೆ
ಕಂಡೊಡಗೂಡಿ ಕಂಠದೊಳು ।
ಗುಂಡಾಕ್ರಿ ಭೈರವಿಯಿಂದ ಕುಸುಮಕೋ
ದಂಡದಲ್ಲಣನ ಪಾಡಿದರು ॥
ವೀಣೆಯದನಿ ಯಾವುದದರೊಳು ಪಾಡುವ
ಗಾನದ ದನಿಯಾವುದೆಂದು”
ಕಾಣಿಸಿಕೊಳ್ಳದೆ ಜಿನಸಿದ್ಧ ಮಹಿಮೆಯ
ಕಾಣಿಸಿ ಪಾಡಿದರೊಲ್ದು ॥
ಚೀರದೆ ಬತ್ತದೆ ಜಾತಿ ಕಟ್ಟಣೆ
ಜಾರದೆ ಮೊಡಲ ದಂಡಿಸದೇ ॥
ಏರವಿರಿಯಲಹುದಹುದು ಲೇಸೆನೆ ಸವಿ
ದೋರಿ ಹಾಡಿದರು ಗಾಯಕರು ॥

ಸಂಗೀತದ ಮೆಚ್ಚುವಿಕೆ–

.............................. ।
...................... ॥
ಚೆನ್ನಾಯ್ತು ಸೊಬಗಾಯ್ತು
ಸೊಗಸಾಯ್ತು ಲೇಸುಲೇ ।
ನಿನ್ನೊಮ್ಮೆ ಯೆಂದು ಕೇಳ್ವಂತೆ ॥
ದನಿಲೇಸು, ಮೇಳದ ಜೋಕೆ ಲೇಸಾಲಾಪ ।
ದನುಭವ ಲೇಸು ಮತ್ತಲ್ಲಿ ॥
ಜಿನನಾಮ ಕೂಡಿತು, ಲೇಸುಲೇಸೆಂದು ರಾ ।
ಯನ ಮುಂದೆ ನುಡಿದರಿಚ್ಛೆಗರು ॥

ಸಂಗೀತದ ಪ್ರಭಾವ–

ಹಸುಳೆ ಕಲ್ಮರ ಪಾವುಪಶುಗಳು ಗಾನ ।
ರಸಕೆ ಸೋಲುವವೆಂದರಿನ್ನು ॥
ರಸಿಕರು ಸೋಲರೆ ಸಭೆಯಲ್ಲಿ ಕೇಳ್ದು ವ್ಯೆ ।
ಮಸಕದಿರ್ದುದು ಬೆರಗಾಗಿ ॥
ಕೊಳಲಿಗೆ ಪಶು ಮಿಗ ಗಂಟೆಗೆ ಹಸುಳೆ ಜೋ ।
ಗುಳಕೆ ಸರ್ಪವು ನಾಗಸರಕೆ ॥
ಎಳವೆಣ್ಣದನಿಗೊಂದು ವೃಕ್ಷ ಗುಂಡಾಕ್ರಿಗೆ ।
ಶಿಲೆಮೊಸರುವುದಿದು ಘನವೆ ॥

ಇದರಲ್ಲಿ ಹಲವು ರಾಗಗಳನ್ನು ; ಸಂಗೀತಗಾರರು ಹಾಡುವಾಗ ಅನುಸರಿಸಬೇಕಾದ ಸ್ಥಿತಿಗಳನ್ನೂ ; ಜತಿ, ಜಾತಿ, ಕಟ್ಟಣೆ ಎಂಬ ಗೀತಶಾಸ್ತ್ರೀಯ ಶಬ್ದಗಳನ್ನೂ, ಸಂಗೀತದ ಪ್ರಭಾವವನ್ನೂ ಹೇಳಿರುವುದಲ್ಲದೆ, ಉದಯರಾಗವನ್ನು ಹಾಡುತ್ತಿದ್ದರೆಂಬುದನ್ನೂ ವಿವರಿಸಿದೆ.

ಮೇಲಿನ ವಿಷಯಗಳು ಕನ್ನಡದಲ್ಲಿಯೂ ಸಂಗೀತಶಾಸ್ತ್ರ ವಿಷಯಕವಾದ ಲಕ್ಷಣಗ್ರಂಥಗಳಿದ್ದಿರಬಹುದೆಂಬ ಭಾವನೆಗೆ ಪೋಷಕವಾಗಿದೆ. ಇವು ಕೆಲವು ಮಾತ್ರ. ಪ್ರಾಸಂಗಿಕವಾಗಿಯೂ ಆನುಷಂಗಿಕವಾಗಿಯೂ ಕನ್ನಡಸಾಹಿತ್ಯರಾಶಿಯಲ್ಲಿ ಸಮಸಾಮಯಿಕ ಸಂಗೀತೋಲ್ಲೇಖಗಳು ಸ್ಪಷ್ಟವಾಗಿ ಮೂಡಿ ಬಂದಿವೆ. ಕಾವ್ಯಪರಿಣತಿಯ ಜೊತೆಗೆ ಸಂಗೀತ ಪರಿಣತಿಯೂ ಕುರಿತೋದದೆಯೇ ಕನ್ನಡಿಗರಿಗೆ ಬಂದಿರಬೇಕು. ನೂರು ಇನ್ನೂರು ವರ್ಷಗಳ ಹಿಂದೆ ರಚಿತವಾದ ಎಲ್ಲ ಕಾವ್ಯಗಳೂ ಇದನ್ನು ಸಿದ್ಧಪಡಿಸುತ್ತದೆ. ಮಹಾಕಾವ್ಯಗಳಲ್ಲಿ ಅಷ್ಟಾದಶ ವರ್ಣನೆಯಂತೆಯೇ ಸಂಗೀತ ವರ್ಣನೆಯೂ ಅನಿವಾರ್ಯವಾಗಿವೆ. ಬಸವಣ್ಣನಂತಹ ವಚನಕಾರರೂ, ಸರ್ವಜ್ಞನಂತಹ ತ್ರಿಪದಿಕಾರರೂ, ನಿಜಗುಣ ಶಿವಯೋಗಿಯಂತಹ ಹಾಡುಗಬ್ಬಗಾರರೂ ಪುರಂದರದಾಸರಂತಹ ದಾಸರೂ, ಸಂಗೀತದ ವಿಷಯವಾಗಿ ಹೇಳದೇ ಇಲ್ಲ. ಸಂಗೀತ ಪ್ರಸ್ತಾಪವಿಲ್ಲದ ಕಾವ್ಯವೇ ಇಲ್ಲ. ಶಾಸ್ತ್ರಕಾರರಾದ ನೃಪತುಂಗ, ನಾಗವರ್ಮರೂ ಅದರ ವಿಷಯವಾಗಿ ವಿಚಾರ ಮಾಡಿದ್ದಾರೆ. ಎಲ್ಲ ಭಕ್ತಿ ಕಾವ್ಯಗಳೂ ಸಂಗೀತವನ್ನು ಉಪಯೋಗಿಸಿಕೊಂಡಿವೆ. ಜೈನರು ಪಂಚಕಲ್ಯಾಣ ಸಂದರ್ಭಗಳಲ್ಲಿಯೂ, ಶೈವ, ವೀರಶೈವ, ವೈಷ್ಣವ ಕವಿಗಳು ವಿವಿಧೆಡೆಗಳಲ್ಲೂ ತಮ್ಮ ಸಂಗೀತ ಪ್ರೇಮವನ್ನು ತೋರ್ಪಡಿಸಿಕೊಂಡಿದ್ದಾರೆ. ಕನ್ನಡ ಕವಿಗಳ ಸಂಗೀತ ಪಾಂಡಿತ್ಯ ಅನ್ಯಾದೃಶವಾದುದು. ಅವರ ಉಲ್ಲೇಖನದಿಂದಲೇ ಭಾರತೀಯ ಸಂಗೀತದ ರಾಗ ಪ್ರಪಂಚದಲ್ಲಿ ಶಾಸ್ತ್ರವು ವಿವರಿಸುವ ಎಲ್ಲ ಪರಿಭಾಷೆ ಮತ್ತು ವಿವರಣೆಗಳನ್ನೂ ಸಂಗ್ರಹಿಸಬಹುದು.

ರಾಗಗಳಲ್ಲಿ ಗ್ರಾಮರಾಗಗಳು, ದೇಶೀರಾಗಗಳು ಎಂಬ ಪ್ರಭೇದಗಳನ್ನು ಕನ್ನಡಿಗರು ಅರಿತಿದ್ದರು. ಅಲ್ಲದೆ ರಾಗಗಳ ಶುದ್ಧ, ಮಿಶ್ರ, ಸಾಳಗಗಳೆಂಬ ಶಾಸ್ತ್ರ ಭೇದಗಳನ್ನು ತಿಳಿದಿದ್ದರು.

ರಾಗಗಳಲ್ಲಿ ಸ್ತ್ರೀ, ಪುಂ, ನಪುಂಸಕಗಳೆಂದು ವಿಭಾಗಿಸುವ ರಾಗರಾಗಿಣೀ ವಿಭಾಗವು ಕನ್ನಡಿಗರಿಗೆ ತಿಳಿದಿತ್ತೆಂಬುದನ್ನು ಭೀಮಕವಿ ಮತ್ತು

ಪದ್ಮಣಾಂಕರು ಉಲ್ಲೇಖಿಸಿದ್ದಾರೆ. ಕನ್ನಡದಲ್ಲಿ ಬತ್ತಿಸರಾಗಗಳು (೩೨) ಪ್ರಸಿದ್ಧವಾಗಿವೆ.

ತಾಳಗಳು.— ಈ ಕ್ಷೇತ್ರದಲ್ಲಿ ಕನ್ನಡಿಗರು ಬಹು ಪ್ರಸಿದ್ಧರು. ೧೬ನೆಯ ಶತಮಾನದವರೆಗೆ ತಾಳವನ್ನು ಮಾರ್ಗ, ದೇಶಿ ಎಂದು ವಿಭಾಗಿಸಿದ್ದರು. ಅವುಗಳಲ್ಲಿ ಚಚ್ಚತ್ಪುಟಾದಿ ಆರು ಮಾರ್ಗತಾಳಗಳೆಂದೂ, ಉಳಿದ ನೂರಾರು ತಾಳಗಳು ದೇಶೀ ಸಂಜ್ಞೆಯನ್ನು ಪಡೆದಿದ್ದುವೆಂದೂ ತಿಳಿದುಬರುತ್ತದೆ. ಕನ್ನಡದ ರನ್ನ, ಅಗ್ಗಳ, ರತ್ನಾಕರರು ಮಾರ್ಗೀತಾಳವನು ಹೇಳಿದ್ದಾರೆ. ಶಾಸ್ತ್ರಪ್ರಸಿದ್ಧವಾದ ನೂರೊಂದು ದೇಶೀತಾಳಗಳನ್ನು ಸಿದ್ಧನಂಜೇಶನೂ, ನೂರೆಂಟು ತಾಳಗಳನ್ನು ರಾಘವಾಂಕನೂ ತಿಳಿಸಿದ್ದಾರೆ ಪದ್ಮಣಾಂಕನು ಮಟ್ಯತಾಳಗಳ ೩೨ ಭೇದಗಳನ್ನೂ, ಭೀಮಕವಿಯು ಜಾತಿ ತಾಳಗಳ ವಿವರಣೆವನ್ನೂ ಹೇಳಿದ್ದಾರೆ.

ಸುಳಾದಿಗಳು ದೇಶೀ ಮತ್ತು ಮಾರ್ಗೀತಾಳಗಳ ಸ್ಥಾನದಲ್ಲಿ ಹೊಸರೀತಿಯ ಸಪ್ತಸ್ವರಗಳನ್ನು ರೂಢಿಗೆ ತಂದಿವೆ. ಜನ್ನ, ಪಾಲ್ಕುರಿಕೆ ಸೋಮನಾಥ, ಪದ್ಮಣಾಂಕ, ಚಂದ್ರಶೇಖರ ಬಾಹುಬಲಿ, ಗೋವಿಂದ ವೈದ್ಯ—ಇವರು ಇವುಗಳನ್ನು ಹೆಸರಿಸಿದ್ದಾರೆ.

ವಾದ್ಯಗಳು.— ಭಾರತೀಯ ಸಂಗೀತ ಶಾಸ್ತ್ರದಲ್ಲಿ ವಾದ್ಯಗಳ ವಿವರಣೆಯು ಬಹು ಶಾಸ್ತ್ರೀಯವಾಗಿ ನಡೆದಿದೆ. ಅವನ್ನು ತತ (ತಂತಿಯನ್ನು ಮೀಟಿ ನುಡಿಸುವ ಸ್ವರ ವಾದ್ಯಗಳು) ಅವನದ್ಧ (ಚರ್ಮದಿಂದ ಬಿಗಿದು ಸಂಘರ್ಷಣದಿಂದ ನಾದವನ್ನುಂಟುಮಾಡುವುದು), ಸುಷಿರ (ರಂಧ್ರದಲ್ಲಿ ಗಾಳಿಯ ಮೂಲಕ ಸ್ವರವನ್ನುಂಟುಮಾಡುವುದು) ಮತ್ತು ಘನ (ಟೊಳ್ಳಿಲ್ಲದ ಘಟ್ಟಿ ವಸ್ತುಗಳನ್ನು ಪರಸ್ಪರ ಹೊಡೆಯುವುದರಿಂದ ನಾದವನ್ನುಂಟುಮಾಡುವ ತಾಳವಾದ್ಯಗಳು) ಎಂದು ನಾಲ್ಕು ಭಾಗ ಮಾಡಬಹುದು ಕನ್ನಡ ಕವಿಗಳಲ್ಲಿ ಸಂಗೀತವಾದ್ಯಗಳನ್ನು ಹೆಸರಿಸದ ಕವಿಯೇ ಇಲ್ಲ.

ಕನ್ನಡ ಸಂಗೀತದ ಇತಿಹಾಸವನ್ನು ಪರಿಭಾಷಾತಂತ್ರಗಳನ್ನೂ ಪ್ರತ್ಯೇಕವಾಗಿ ರಚಿಸಬಹುದು.

ಗೀತಿ, ಆಲಾಪ, ಠಾಯಿ ಮತ್ತು ಪ್ರಬಂಧಗಳು ಸಂಗೀತದ ನಾಲ್ಕು ಆಧಾರಸ್ತಂಭಗಳು. ಇದನ್ನೇ ಕನ್ನಡದವರು 'ಚತುರ್ದಂಡಿ' ಎಂದು ಕರೆದರು. ಮಹಾವಾಗ್ಗೇಯಕಾರನಾದ ಕನ್ನಡಿಗ ಗೋಪಾಲನಾಯಕನು ೧೩-೧೪ನೆಯ ಶತಮಾನಗಳಲ್ಲಿ ಇದನ್ನು ಮೊದಲು ಬಳಕೆಗೆ ತಂದಂತೆ ಕಾಣುತ್ತದೆ.

ಕನ್ನಡ ನಾಡಿನಲ್ಲಿ ಸಂಗೀತವನ್ನು ವೃತ್ತಿಯಾಗಿಯೂ ಕಲಾವಿಲಾಸಕ್ಕಾಗಿಯೂ (ಹವ್ಯಾಸಿಯಾಗಿಯೂ) ಕಲಿಯುತ್ತಿದ್ದರು. ಸ್ತ್ರೀ ಪುರುಷರಿಬ್ಬರೂ ಈ ದೃಷ್ಟಿಗಳಿಂದ ಅಭ್ಯಾಸ ಮಾಡಿದ್ದಾರೆ. ಸಂಗೀತಗಾರರಿಗಾಗಿಯೇ ನಿರ್ದಿಷ್ಟ ಬೀದಿಗಳೂ ಬಡಾವಣೆಗಳೂ ಇದ್ದವೆಂದು ರನ್ನ, ಅಗ್ಗಳ, ಕಮಲಭವ, ಸೋಮದೇವ, ರತ್ನಾಕರವರ್ಣಿಗಳು ಹೇಳುತ್ತಾರೆ. ಹಾಗೆಯೇ ನೃತ್ಯಗಳ ಮತ್ತು ನೃತ್ಯ ಶಾಲೆಗಳ ವಿಷಯವಾಗಿ ಪಂಪ, ಪೊನ್ನ, ನೇಮಿಚಂದ್ರ, ಅಗ್ಗಳ, ರತ್ನಾಕರವರ್ಣಿಗಳು ತಿಳಿಸುತ್ತಾರೆ. ಇದಕ್ಕೆ 'ಗುಣಣಿ' ಎಂಬ ಹೆಸರಿದ್ದಂತೆ ಕಂಡುಬರುತ್ತದೆ. ಕರ್ನಾಟಕದಲ್ಲಿ ಬಹಳ ಹಿಂದಿನ ಕಾಲದಿಂದ ಸಂಗೀತ ಕಚೇರಿಗಳು ನಡೆಯುತ್ತಿದ್ದವೆಂದು ತಿಳಿದುಬರುತ್ತದೆ. ಇದಕ್ಕೆ 'ಕೇಳಿಕೆ' ಎಂಬ ಹೆಸರಿದ್ದಿತಂತೆ.

ಒಬ್ಬರೇ ಹಾಡುವ ಪದ್ಧತಿಯೂ ವೃಂದಗಾನವೂ ರೂಢಿಯಲ್ಲಿದ್ದುದು ಅಗ್ಗಳ, ನಾಗಚಂದ್ರ, ಪಂಪ, ಪೊನ್ನ, ಮೊದಲಾದವರುಗಳಿಂದ ಸೂಚಿತವಾಗಿದೆ. ವೃಂದಗಾನ ನಾಯಕರಿಗೆ 'ಮುಖರಿ' ಎಂಬ ಹೆಸರಿತ್ತು. ವೃಂದಗಾನದಲ್ಲಿ 'ದಂಡಿಕೆ' ಎಂಬ ವೀಣಾಪ್ರಭೇದವು ಪಕ್ಕವಾದ್ಯವಾಗಿರುತ್ತಿತ್ತು. ಸಾರ್ವಜನಿಕ ಕಛೇರಿಯಲ್ಲಿ ತತ, ಸುಷಿರ, ಅವನದ್ಧ ವಾದ್ಯಗಳಲ್ಲಿ ಮೇಳನವು ಇರುತ್ತಿತ್ತು. ತನಿ ಕಛೇರಿಗಳೂ ನಡೆಯುತ್ತಿತ್ತು ಮೇಳ ನಾಯಕನಿಗೆ 'ನಯಕಾರ'ನೆಂದೂ ವಾಗ್ಗೇಯಕಾರನಿಗೆ 'ಬಯಕಾರ'ನೆಂದೂ ಹೆ ರಿದ್ದಿತು—ಎಂಬುದು ರತ್ನಾಕರವರ್ಣಿಯಿಂದ ತಿಳಿದು ಬರುತ್ತದೆ. ಸಂಸ್ಕೃತದ 'ಗೋಷ್ಠೀಗಾನ'ವೇ ಕನ್ನಡದಲ್ಲಿ ಪಂಪನು ತಿಳಿಸುವ 'ಗೊಟ್ಟೀಗಾನ'

ನೃತ್ಯದ ಹಿಮ್ಮೇಳವನ್ನು ಕನ್ನಡಿಗರು 'ಸಂಪ್ರದಾಯ' ಎಂದು ಕರೆದಿದ್ದಾರೆ. ಕಮಲಭವ ಅಗ್ಗಳ, ನೇಮಿಚಂದ್ರರು ಈ ಶಬ್ದವನ್ನು ಉಪಯೋಗಿಸಿದ್ದಾರೆ.

ಕನ್ನಡಕವಿಗಳು ತತವಾದ್ಯಗಳನೇಕ ಸಂಖ್ಯೆ ವಾದುವನ್ನು ಹೆಸರಿಸಿದ್ದಾರೆ. ಅವುಗಳಲ್ಲಿ ವೀಣೆ ಪ್ರಾಧಾನ್ಯ. ಪದ್ಮಣಾಂಕನೊಬ್ಬನೇ ೩೨ ವಿಧ ವೀಣೆಯನ್ನು ತಿಳಿಸಿದ್ದಾನೆ. ಕೆಲವು ಕನ್ನಡ ಕವಿಗಳು ವೀಣೆಯ ರಚನೆಯನ್ನೂ ಅದರ ಗುಣ ದೋಷಗಳನ್ನು ತಿಳಿಸಿದ್ದಾರೆ. ಕೆಲವರು ಅದರ ೧೨ ವಿಭಾಗಗಳನ್ನು ತಿಳಿಸಿದ್ದಾರೆ. ಮತ್ತೆ ಕೆಲವರು ಅದರ ವಾದನ ತಂತ್ರವನ್ನು ವಿವರಿಸಿದ್ದಾರೆ.

ಕನ್ನಡ ಕವಿಗಳಿಗೆ — ಜನಕ್ಕೆ — ವೀಣೆಯು ಅಕ್ಕರೆಯ ವಾದ್ಯ. ಕನ್ನಡ ಕಾವ್ಯಗಳಲ್ಲಿ ನಾಯಕ ನಾಯಕಿಯರು, ಸಖಿಯರು, ದೂತಿಯರು— ಎಲ್ಲರೂ ವೀಣೆಯಲ್ಲಿ ನಿಸ್ಸೀಮರೇ. ನಾಯಕಿಯ ಕ್ರೋಧಾನುರಾಗಗಳನ್ನು ಪ್ರದರ್ಶಿಸುವಾಗಲೂ, ಯುದ್ಧದ ಕಾವನ್ನು ಏರಿಸುವಾಗಲೂ, ಬೇಟೆಯ ಸಂದರ್ಭದಲ್ಲಿಯೂ ವೀಣಾವಾದನ ಪ್ರಯೋಗವಾಗುತ್ತದೆ.

ಕನ್ನಡ ಕಾವ್ಯಗಳಲ್ಲಿ ಉಪಯುಕ್ತವಾಗಿರುವ ಸುಷಿರವಾದ್ಯಗಳನೇಕವಿವೆ. ಅವುಗಳಲ್ಲಿ ಕಹಳೆ, ಶಂಖ, ಕೊಳಲು, ತುತ್ತೂರಿ ಇವು ಮುಖ್ಯವಾದವು.

ಅನವದ್ಧ ವಾದ್ಯಗಳಲ್ಲಿ ಮೃದಂಗ, ಮದ್ದಳೆ, ಮುರಜ, ಭೇರಿ, ಢಕ್ಕ, ಪಟಹ ಮೊದಲಾಗಿ ಅಸಂಖ್ಯಾತವಾದುವುಗಳು ಉಕ್ತವಾಗಿವೆ. ಇವುಗಳೇನಕಗಳಿಗೆ ಶಾಸ್ತ್ರಗ್ರಂಥಗಳಲ್ಲಿ ಆಕರವೇ ಸಿಕ್ಕುವುದಿಲ್ಲ.

ಇವೆಲ್ಲವುಗಳಿಂದ ಕನ್ನಡ ಭಾಷೆಯಲ್ಲಿಯೂ ಕೂಡ ಸಂಗೀತ ಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರತ್ಯೇಕ ಗ್ರಂಥಗಳಿದ್ದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಅವುಗಳನ್ನು ಕಂಡುಹಿಡಿಯುವುದು ವಿದ್ವಾಂಸರ ಜವಾಬ್ದಾರಿ.

★

ಯುವವಾಣಿ

# ಕ್ಷಮೆ

ಕ್ಷಮೆಯೆಂಬುದು ಸಹಿಸಿಕೊಳ್ಳುವ ತಡೆದುಕೊಳ್ಳುವ ಗುಣ. ದುಃಖವನ್ನು ಸಹನಮಾಡುವುದೇ ಕ್ಷಮೆ. ಸುಖ ದುಃಖಗಳು ಸಮನಾಗಿ ಸ್ವೀಕಾರಮಾಡುವುದನ್ನು ಕಲಿಯಬೇಕೆಂದು ಎಲ್ಲಾ ಧರ್ಮಗಳು ಸಾರುತ್ತವೆ. ಕ್ಷಮಾಗುಣವನ್ನು ಬೆಳೆಸಿಕೊಂಡು ಶಕ್ತಿಶಾಲಿಗಳಾದವರು ಜಗತ್ತಿನಲ್ಲಿ ಬೇರಾವಶಕ್ತಿಗೂ ಹೆದರಬೇಕಾದ್ದಿಲ್ಲ.

'ತಾನ್ ತಿತಿಕ್ಷಸ್ವ' ಈ ಗೀತಾವಾಕ್ಯವನ್ನು ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿದ. ತಾತ್ಪರ್ಯ– ಸುಖದುಃಖಗಳು ಬಂದು ಹೋಗತಕ್ಕವು. ಅನಿತ್ಯವಾದವು. ಆದ್ದರಿಂದ ಸುಖವಾದರೆ ಅತಿಯಾಗಿ ಹಿಗ್ಗದೆ, ದುಃಖವಾದರೆ ಅತಿಯಾಗಿ ಕುಗ್ಗದೆ ಸಹಿಸಿಕೊಳ್ಳಬೇಕು. 'ತಾಳ್ಮೆಯಿಂದ ಬಾಳ್ಮೆ' ಎಂಬ ಗಾದೆ ಮಾತು ಕೇಳಿದ್ದೇವೆ. ಸಮಾಧಾನದಿಂದ ಬದುಕಬೇಕು ಎಂದು ಬಯಸುವವರು ಸಮಾಧಾನವನ್ನು ಅಡಿಗಡಿಗೆ ಕೆಡಿಸಿಕೊಳ್ಳಬಾರದು. ಸಂಸಾರಿಗಳಾದ ನಮಗೆ ಅಡ್ಡಿ ಆತಂಕಗಳು ಅಪಾರ. ಆದ್ದರಿಂದಲೇ ಕ್ಷಮಾಶೀಲತೆಯನ್ನು ಅಭ್ಯಸಿಸುವುದು ಕ್ಷೇಮ.

"ಕ್ಷಮಯಾ ಧರಿತ್ರೀ" ಎಂಬ ಸೂಕ್ತಿಯೊಂದಿದೆ. ಈ ಸೂಕ್ತಿ ಕ್ಷಮಾಗುಣಕ್ಕೆ ಸಾಕಾರವಾದ ಉದಾಹರಣೆ. ಭೂಮಿಯ ಮೇಲೆ ಗಲೀಜನ್ನು ಹರಿಯಿಸಿದರೂ ಸರಿಯೆ ಅಥವ ಗಂಧದಿಂದ ಅಭಿಷೇಕ ಮಾಡಿದರೂ ಸರಿಯೆ ಎರಡನ್ನು ಸಮನಾಗಿ ಸ್ವೀಕಾರಮಾಡುತ್ತದೆ. ಈ ದೃಷ್ಟಿಯಿಂದಲೇ ಭೂಮಿಯನ್ನು 'ಕ್ಷಮಾ' ಎಂದೇ ಕರೆಯುತ್ತಾರೆ. ಭೂಮಿಯ ಪುತ್ರಿ ಜಾನಕಿ. ರಾವಣನ ವಧೆಯಾದ ಮೇಲೆ ಜಾನಕಿಯನ್ನು ಕಂಡುಬರಲು ಹನುಮಂತನು ಅಶೋಕವನಕ್ಕೆ ಹೋಗಿದ್ದಾಗ "ಅಮ್ಮಾ, ನಿನ್ನನ್ನು ಅನೇಕ ಬಗೆಯಾಗಿ ಕಾಡಿದ ಈ ರಾಕ್ಷಸ ಸ್ತ್ರೀಯರನ್ನು ಕೊಂದು ಬಿಡುತ್ತೇನೆ ಅಪ್ಪಣೆಕೊಡು" ಎಂದು ಕೇಳಿದ, ಅದಕ್ಕೆ ಜಾನಕಿ "ಯಾರೂ ಯಾವ ತಪ್ಪು ಮಾಡುವುದಿಲ್ಲವೇನು ? ರಾವಣನ ಅಪ್ಪಣೆಯಂತೆ ನಡೆದುಕೊಂಡ ಇವರಲ್ಲಿ ಯಾವುದೇ ತಪ್ಪಿಲ್ಲ" ಎಂದಳು. ತಾಯಿಯಂತೆ ಮಗಳಲ್ಲವೇ! ಮಾನವನಿಗೆ ಆಭರಣ ರೂಪ, ರೂಪಕ್ಕೆ ಆಭರಣ ಗುಣ, ಗುಣಕ್ಕೆ ಆಭರಣ ಜ್ಞಾನ, ಜ್ಞಾನಕ್ಕೆ ಆಭರಣ ಕ್ಷಮೆ. ಇಂಥಹ ನಲ್ನುಡಿಗಳು 'ಕ್ಷಮೆ'ಯ ಮಹತ್ವವನ್ನು ತಿಳಿಸಿಕೊಡುತ್ತವೆ.

ಸತ್ಯಂ ಮಾತಾ ಪಿತಾ ಜ್ಞಾನಂ
ಧರ್ಮೋ ಭ್ರಾತಾ ದಯಾ ಸಖಾ।
ಶಾಂತಿಃ ಪತ್ನೀ ಕ್ಷಮಾ ಪುತ್ರಃ
ಷಡೇತೇ ಮಮ ಬಾಂಧವಾಃ॥

ಈ ಸುಭಾಷಿತದಲ್ಲಿ ನಮ್ಮ ಆರು ಗುಣಗಳೇ ನಮ್ಮ ಬಂಧುಗಳು, ಎಂದು ತಿಳಿಸಿ, 'ಕ್ಷಮೆ'ಯನ್ನು 'ಪುತ್ರ'ನಿಗೆ ಹೋಲಿಸಿದೆ. ಮಂಥನ ಮಾಡಬೇಕಾದ ವಿಚಾರ.

ಸಂಕಲ್ಪದಿಂದ ಶರೀರವು ಕಾಯೋನ್ನತವಾಗಿ ಬೆಳೆಯುತ್ತದೆ. ಬಲಿತ ಮನಸ್ಸಿನಿಂದ ಚಿಂತನ, ಮಂಥನವಾಗಿ ಮಾನೋನ್ನತಿಯಾಗುತ್ತದೆ. ಪ್ರೇಯಸ್ಸಿಗಿಂತ – ಶ್ರೇಯಸ್ಸು ಶ್ರೇಷ್ಠ ಎಂದು ತೋರಿದಾಗ ವಿದ್ಯೋನ್ನತಿಯಾಗುತ್ತದೆ. ಹೀಗೆಯೇ ತಾಳಿಕೊಳ್ಳುವ, ಉದಾರ ಬುದ್ಧಿಯನ್ನು ಬೆಳೆಸಿಕೊಂಡಾಗ ಕ್ಷಮೋನ್ನತಿಯಾಗಿ ಉದ್ಧಾರಮಾರ್ಗ ತೋರಿ ಬಾಳು ಹಸನಾಗುತ್ತದೆ.

ತಾಳ್ಮೆಯುಳ್ಳವರಿಗೆ ಮಾತ್ರ ಗುಣ ಸಮೃದ್ಧಿ. ಕ್ಷಮಿಸುವುದು ಎಂದಿಗೂ ಅಶಕ್ತಿಯ ಕುರುಹಲ್ಲ. ಮಹಾಸಾಮರ್ಥ್ಯ ಹಾಗೂ ಮನಃಪರಿಪಾಕಕ್ಕೆ ದಾರಿ. ಪ್ರತೀಕಾರದಿಂದ ಬರುವುದು ಕ್ಷಣಿಕ ಸುಖ. ಕೇವಲ ಸುಖಾಭಾಸ. ಕ್ಷಮೆಯಿಂದ ಬರುವುದು ಶಾಶ್ವತಸುಖ, ಸತ್ಯಸುಖ. ರಾಗದ್ವೇಷದಿಂದ ಮುಕ್ತರಾಗಿ ಬಾಳು ಬಂಧುರವಾಗಬೇಕಾದರೆ ಕ್ಷಮಾಶಕ್ತಿಯನ್ನು ಪಡೆಯಬೇಕು. ಕ್ರಿಯೆ ಇದ್ದಾಗ – ಪ್ರಕ್ರಿಯೆ ಸಹಜ. ಆದರೆ ಇದನ್ನು ಉತ್ಥಾನಕ್ರಿಯೆಯಾಗಿ ಪರಿವರ್ತಿಸಿಕೊಂಡಾಗ ಕ್ಷಮಾಬಲ ಲಭ್ಯ.

ಸ್ವಾಮಿ ವಿವೇಕಾನಂದರು "ಇನ್ನೊಬ್ಬರ ಕೆಟ್ಟ ಮಾತುಗಳಿಂದ ನಿಮಗೆ ಸಿಟ್ಟು ಬಾರದಿರುವಿಕೆ ಕ್ಷಮೆಯೆಂದು ಕರೆಯಬಹುದು" ಎನ್ನುತ್ತಾರೆ. ಒಮ್ಮೆ ಜ್ಞಾನದೇವರು ಗಂಗಾನದಿಯಲ್ಲಿ ಸ್ನಾನಮಾಡಿ ದಡದ ಮೇಲೆ ಜಪಕ್ಕೆ ಕುಳಿತರು ಬುದ್ಧಿಗೇಡಿಯೊಬ್ಬ ಅವರ ಮೇಲೆ ಉಗುಳಿದ. ಜ್ಞಾನದೇವರು ನಕ್ಕು ಮತ್ತೆ ಸ್ನಾನಮಾಡಿ ಜಪಕ್ಕೆ ಕುಳಿತರು. ಪುನಃ ಉಗುಳಿದ ಆ ಮಂದಮತಿ. ಹೀಗೆ ಐದು–ಆರು ಸಲವಾದಾಗಲೂ ಜ್ಞಾನದೇವರು ಹಸನ್ಮುಖಿಗಳಾಗಿದ್ದರು. ಆಗ ಬುದ್ಧಿಗೇಡಿ "ಏನು ತಮಗೆ ಕೋಪ ಬರಲಿಲ್ಲವೇಕೆ ?" ಎಂದಾಗ, ಮಹಾತ್ಮರು– "ಅಯ್ಯಾ! ನಿನ್ನಿಂದ ಈದಿನ ಆರುಸಲ ಪವಿತ್ರ ಗಂಗಾನದಿಯ ಸ್ನಾನವಾಗಿ ಮಹದುಪಕಾರವಾಯ್ತು ಕೃತಜ್ಞತೆಗಳು" ಎಂದರು. ನಂತರ ಮಂದಮತಿ ನಾಚಿ ಸುಮ್ಮನಾದ.

ಕ್ಷಮಾಶಕ್ತಿಯನ್ನು ಪಡೆಯಬೇಕಾದರೆ, ಇತರರ ದೋಷವನ್ನು ಎಣಿಸದೆ, ನಮ್ಮ ದೋಷಗಳನ್ನು ಅರಿತುಕೊಂಡು ಈ ವಿಶಾಲ ಜಗತ್ತಿನಲ್ಲಿ ಅನ್ಯರಾರೂ ಇಲ್ಲ, ಎಲ್ಲರೂ ನಮ್ಮವರೆ ಎಂದು ತಿಳಿದರೆ ಸಾಕು.

ತಾಳ್ಮೆಯೇ ಅತ್ಯಂತ ಶ್ರೇಷ್ಠ ಗುಣ. ಇದರ ಕೃಷಿ–ಎಲ್ಲಾ ಕೃಷಿಗಳಿಗಿಂತ ಮೇಲ್ಮಟ್ಟದ್ದು. ದೋಷವರಸದ ಹಿರಿಯ ತಾಯ್ತನದಮೂರ್ತಿ ಸ್ವರೂಪರಾದ ಶ್ರೀಮಾತೆ ಶ್ರೀ ಶಾರದಾದೇವಿಯವರು ಪರದೋಷಗಳನ್ನು ಕಾಣುತ್ತಿರಲಿಲ್ಲ ಎಂಬುದನ್ನು ಅವರ ಜೀವನದುದ್ದಕ್ಕೂ ಕಾಣಬಹುದು. ಇಲ್ಲಿ ದೃಷ್ಟಾಂತವೊಂದನ್ನು ಅವಲೋಕಿಸೋಣ. ಉದ್ಬೋಧನದ ಮುಂದೆ ಕೆಲವು ಗುಡಿಸಲುಗಳಲ್ಲಿ ಕೂಲಿಜನ ವಾಸವಾಗಿದ್ದರು. ಆ ಗುಡಿಸಲೊಂದರಲ್ಲಿ ಒಬ್ಬ ಮನುಷ್ಯನ ಉಪಪತ್ನಿ ಭಯಂಕರ ಕಾಯಿಲೆಗೆ ತುತ್ತಾದಳು. ಆ ಉಪಪತಿ ಅವಳಿಗೆ ತುಂಬಾ ಶ್ರದ್ಧೆಯಿಂದ ಸೇವೆ ಶುಶ್ರೂಷೆ ಮಾಡಿದ. ಇದನ್ನು ಗಮನಿಸಿದ ಶ್ರೀಮಾತೆಯವರು ಅವನ ಶ್ರದ್ಧಾಯುತ ಸೇವೆಯನ್ನು ಕೊಂಡಾಡುತ್ತಿದ್ದಾರೆ! ಅವನ ದೋಷಗಳ ಕಡೆಗೆ ಗಮನಕೊಡದೆ ಅವನ ಸೇವೆಯನ್ನು ಎತ್ತಿ ತೋರಿಸಿ ಕೊಂಡಾಡುತ್ತಿದ್ದಾರೆ. ಈ ಮೂಲಕ ಶ್ರೀ ಮಾತೆಯವರು ದೋಷವನ್ನು ಕಾಣದಿರುವ ಕ್ರಮವನ್ನು ತೋರಿಸಿಕೊಡುತ್ತಿದ್ದಾರೆ.

'ಕ್ಷಮಾಶೀಲ'ವೊಂದು ಮಾನಸತೀರ್ಥ ; ಇದರಲ್ಲಿ ಮಿಂದವರು-ಇಚ್ಛಾ-ದ್ವೇಷದಿಂದ ಮುಕ್ತರಾಗಿ ಪರಮಗತಿಯನ್ನು ಹೊಂದುವರು. "ವಿಷ್ಣು ಪತ್ನೀಂ ಕ್ಷಮಾಂ ದೇವೀಂ ಮಾಧವೀಂ ಮಾಧವ ಪ್ರಿಯಾಮ್" (ಶ್ರೀಸೂಕ್ತ), ಶ್ರೀ ವಿಷ್ಣು ಸಹಸ್ರನಾಮದಲ್ಲಿ "ಓಂ ಕ್ಷಮಾಯ ನಮಃ" ಎಂಬುದಾಗಿ ಹೇಳಲ್ಪಟ್ಟಿದೆ. ಅಂದರೆ ಪರಮಾತ್ಮನು ಸಮಸ್ತ ಕಾರ್ಯಗಳಲ್ಲಿ ಸಮರ್ಥನಾಗಿರುವನು ಅಥವ ಸಹನೆಯುಳ್ಳವನು. ಇಲ್ಲಿ 'ಕ್ಷಮಾಶಕ್ತಿ'ಯನ್ನು ದೇವಶಕ್ತಿಯಾಗಿ ಗುರುತಿಸಬಹುದು.

ಕ್ಷಮಾಗುಣ ಯಾರಲ್ಲಿ ನೆಲೆಯಾಗಿರುತ್ತದೋ ಅಂಥವರಲ್ಲಿ ಸಿಟ್ಟಿನವೆಚ್ಚವನ್ನು, ದ್ವೇಷದ ಕ್ರಿಯವನ್ನು ಹಾಗೂ ಉತ್ಸಾಹದ ಅಪವ್ಯಯವನ್ನು ಉಳಿಸುತ್ತದೆ. ರಸಭಾವನೆಗಳಿಗೆ ಪುಟಕೊಡುವ

'ಮತ್ತೀಕೆರೆ ಅನಂತು'

ಕುಲುಮೆಯೇ 'ಕ್ಷಮೆ'. ಕಹಿಯಾದ ಅನುಭವದಿಂದಲೇ ಸಿಹಿಯಾದ ಕೃತಿ ಹೊರಬೀಳುವುದು: ಪರಿವರ್ತನಕಾರರ, ಸಮಾಜ ಸುಧಾರಕರ ಸಮಸ್ಯೆಗಳನ್ನು ಪರಿಹರಿಸಬಲ್ಲುದೇ 'ಕ್ಷಮೆ'. ಕ್ಷಮಾಗುಣ ಯಾರಲ್ಲಿ ಕ್ಷಾಮವಾಗಿರುವುದೋ ಅಂಥವರ ಬಾಳು ಬರಡು.

ಮಾನವ ಪ್ರೇಮವನ್ನು ವಿಕಸಿಸುವುದು, ಹಾಗೂ ಆತ್ಮ ಪ್ರತಿಧ್ವನಿಯನ್ನು ಕೇಳಿಸುವುದೇ 'ಕ್ಷಮಾಶಕ್ತಿ'. ಜೀವನದ ಭಾರವನ್ನು ಹಗುರ–ಹಸನು ಗೊಳಿಸುವ ಯೋಗವೇ 'ಕ್ಷಮಾಗುಣ'. ಆತ್ಮಶಕ್ತಿ ಹೆಚ್ಚಲು, ದೇಹ ದೃಢವಾಗಲೂ ಮನಸ್ಸು ಮೃದುವಾಗಲೂ 'ಕ್ಷಮಾಬಲ'ವೇ ಪೂರಕ.

ಕ್ಷಮೆ ದೋಷಿಗಳಲಿ, ಕೆಚ್ಚದೆ
ವಿಧಿಯ ಬಿರುಬಿನಲಿ।
ಸಮತೆ ನಿರ್ಮತ್ಸರತೆ ಸೋಲ್ಗೆಲವುಗಳಲಿ॥
ಶಮವನೀಂ ಗಳಿಸಲೀ ನಾಲ್ಕು
ತಪಗಳೇ ಸಾಕು।
ಭ್ರಮೆಯೋ ಮಿಕ್ಕೆಲ್ಲ ತಪ–ಮಂಕುತಿಮ್ಮ॥

'ಕ್ಷಮಾಗುಣ' ಒಂದು ದಿವ್ಯ ತಪಶ್ಶಕ್ತಿ. ಇದು ಎಲ್ಲಾ ಶಕ್ತಿಗಳ ವಿಕಾಸಕ್ಕೆ ಆಧಾರ.

ಕ್ಷಮೆಗೆ ವಿರುದ್ಧ ದಿಕ್ಕಿನಲ್ಲಿ ಚಿಂತಿಸಿದಾಗ 'ಅಕ್ಷಮ್ಯ' ಎಂಬ ಪದವನ್ನು ಕೇಳಿದ್ದೇವೆ. ಕೆಲವು ಅಪರಾಧಗಳು ಅಕ್ಷಮ್ಯ; ಉದಾಹರಣೆಗೆ – ಕೊಲೆ ಪಾತಕಿಗಳಿಗೆ, ದೇಶದ್ರೋಹಿಗಳಿಗೆ 'ಕ್ಷಮೆ' ಇಲ್ಲ; ಪಾತ್ರಾಪಾತ್ರರಿಗೆ ಕ್ಷಮಾದಾನ ತಾರತಮ್ಯ ವಿವೇಚನೆಯಿಂದ ಸಲ್ಲಬೇಕು. ಕೆಲವೊಮ್ಮೆ ಲೋಕ ವ್ಯವಹಾರದಲ್ಲಿ ಕಾನೂನು ರೀತ್ಯ 'ಅಕ್ಷಮ್ಯ'ವಾದರೂ, ಭಗವಂತನಿಂದ 'ಕ್ಷಮೆಯುಂಟು'. ಇಲ್ಲಿ ಮಹನೀಯರ ನುಡಿಯೊಂದನ್ನು ಸ್ಮರಿಸಬಹುದು – "ಪಾಪದ ಕಾರ್ಯ ಕಾರಣಗಳನ್ನು ದೂಶಿಸಬೇಕೆ ಹೊರತು ಪಾಪಿಗಳನ್ನು ದೂಷಿಸುವುದಲ್ಲ." ಕ್ಷಮಾಶೀಲತೆ ಅಸೀಮವಾದದ್ದು, ಮಾನವತಾಧರ್ಮವೇ ಇದರ ಬುನಾದಿ.

ತಾಳ್ಮೆಯುಳ್ಳವರನ್ನು ಮಹನೀಯರೆಂದು ಜನರು ಸದಾ ನೆನೆಯುತ್ತಿರುತ್ತಾರೆ. ಸಂಯಮವಿಲ್ಲದೆ ಯಾವ ಮಹತ್ಕಾರ್ಯವೂ ಸಾಧ್ಯವಿಲ್ಲ. ಶ್ರೀ ಶಂಕರರು 'ಸಹನಂ ಸರ್ವ ದುಃಖಾನಾಂ ತಿತಿಕ್ಷಾ ಸಾ ಶುಭಾಮತಾ' (ಎಲ್ಲಾ ದುಃಖಗಳನ್ನು ಸಹಿಸುವುದೇ ಶುಭವಾದ ಕ್ಷಮಾ ಶೀಲವೆನಿಸುವುದು) ಎನ್ನುತ್ತಾರೆ. ಕ್ಷಮೆ ಅತ್ಯಂತ ಶ್ರೇಷ್ಠವಾದ ಪ್ರಾರ್ಥನೆಯ ಪ್ರಕಾರವೂ ಹೌದು. ಗೌತಮ ಬುದ್ಧ ತಾನು ಬುದ್ಧನಾಗುವುದಕ್ಕೆ ಮುಂಚೆ ಬೆಳೆಸಿಕೊಂಡ ಅನೇಕ ಗುಣಗಳಲ್ಲಿ 'ಕ್ಷಮೆ'ಯೂ ಒಂದು. ಕ್ಷಮಾಗುಣವನ್ನು ಬೆಳೆಸಿಕೊಂಡದ್ದರಿಂದಲೇ ಆತ ಅಹಿಂಸೆಯನ್ನು ಪೂರ್ಣವಾಗಿ ಆಚರಿಸುವುದು ಸಾಧ್ಯವಾಯ್ತು.

ಕ್ಷಮಾಗುಣದ ಮಹತ್ವವನ್ನು ಹೀಗೆ ಗುರುತಿಸಬಹುದು–

ಕ್ಷಮಯಾ ರೋಚತೇ ಲಕ್ಷ್ಮೀ
ಬ್ರಾಹ್ಮೀ ಸೌರೀ ಯಥಾ ಪ್ರಭಾ।
ಕ್ಷಮಿಣಾಮಾಶು ಭಗವಾಂ
ಸ್ತುಷ್ಯತೇ ಹರಿರೀಶ್ವರಃ॥ (ಭಾಗವತದಿಂದ)

ಕ್ಷಮೆಯಿಂದ ಮನುಷ್ಯನ ಮುಖ ಕಾಂತಿ, ಸೂರ್ಯನ ಪ್ರಭೆಯಂತೆ ಬೆಳಗುತ್ತದೆ. ಸರ್ವೇಶ್ವರನಾದ ಪರಮಾತ್ಮನು ಕ್ಷಮೆಯುಳ್ಳವರಲ್ಲಿ ಬಹಳ ಬೇಗ ಸಂತೋಷಪಡುತ್ತಾನೆ.

ಕೊನೆಯದಾಗಿ, ಆತ್ಮವೆಂಬ ನದಿಯು 'ಕ್ಷಮಾ' ಎಂಬ ನೀರಿನಿಂದ ತುಂಬಿದೆ ಎಂದುಕೊಂಡರೆ, ಅದರ ಆಳ ಸತ್ಯ, ಶೀಲವೇ ದಡ, ಕರುಣೆಯೇ ತರಂಗ, ಅಂಥಹ ದಿವ್ಯತೀರ್ಥದಲ್ಲಿ ಮಿಂದು ಪುನೀತರಾಗೋಣ.

---

(20 ನೇ ಪುಟದಿಂದ)

ಮೇಘದೂತದಲ್ಲಿ ಯಕ್ಷರ ಮೂಲಕ ನಿರ್ಮಿತವಾದ ಅಲಕಾನಗರದ ಶಯನಾಗಾರದಲ್ಲಿ ರತ್ನದೀಪದ ಉಲ್ಲೇಖ ಬರುತ್ತದೆ.

ಭಾರತೀಯ ಲೋಕಸಾಹಿತ್ಯದಲ್ಲಿ ದೀಪಗಳ ಉಲ್ಲೇಖ ಬಹಳಷ್ಟಿದೆ. ಕಾಂಕಣ ಹಳ್ಳಿಯ ನವವಧು ಒಬ್ಬಳು ತನ್ನ ಸಖಿಯೊಬ್ಬಳೊಂದಿಗೆ, "ಅವರು ಪರ್ವತಗಳಿಂದ ಹಿಂದಿರುಗುವಾಗ, ಅವನು ದಾರಿತೋರಿಸಲು ಕೇದಗೆಯ ಹೂವಿನ ಹತ್ತಿರ ದೀಪ ಇಡುತ್ತಾನೆ" ಎಂದಳು–ಇತ್ಯಾದಿ.

ಸಾಹಿತ್ಯ ಮತ್ತು ಧಾರ್ಮಿಕ ಗ್ರಂಥಗಳಲ್ಲಿಯೇ ದೀಪಗಳ ಉಪಯೋಗ ಮಾಡಿರಬಹುದು ಎಂದಲ್ಲ. ಸಂಗೀತ ಶಾಸ್ತ್ರದಲ್ಲೂ ದೀಪಗಳ ವರ್ಣನೆ ಬರುತ್ತದೆ. ಶಾಸ್ತ್ರೀಯ ಸಂಗೀತದಲ್ಲಾದರೋ... 'ದೀಪಕರಾಗ' ಬಹಳ ಪ್ರಸಿದ್ಧವಾಗಿದೆ. ಒಂದುವೇಳೆ ಈ ರಾಗವನ್ನು ಸರಿಯಾಗಿ ಮತ್ತು ಕಲಾತ್ಮಕವಾಗಿ ಹಾಡಿದ್ದೇಯಾದರೆ ಅದು ಕೇಳುಗರ ಹೃದಯದಲ್ಲಿ ಬೆಳಕಿನ ಜ್ಯೋತಿಯನ್ನು ಪ್ರಜ್ವಲಿಸುತ್ತದೆ ಎಂದು ಹೇಳುವುದೂ ಉಂಟು. ದೀಪಕರಾಗದ ಸಂಬಂಧದಲ್ಲಿ ಒಂದು ಪ್ರಸಿದ್ಧ ಕಥೆಯಿದೆ

ತಾನ್‌ಸೇನ್ ದೀಪಕರಾಗ ಹಾಡಿದಾಗ ಸಾಮ್ರಾಟ್ ಅಕ್ಬರನ ಸಭೆಯಲ್ಲಿ ಎಲ್ಲಾ ದೀಪಗಳು ಆ ರಾಗದ ಚಮತ್ಕಾರದಿಂದಲೇ ಹತ್ತಿಕೊಂಡವಂತೆ.

ಸಂಗೀತಶಾಸ್ತ್ರ ಮಾತ್ರವಲ್ಲ, ಭಾರತೀಯ ಚಿತ್ರಕಲೆಯೂ ದೀಪದಿಂದ ಹೊರತಾಗಿಲ್ಲ, ಅಥವಾ ೧೮ ನೇ ಶ. ಮಾ. ದ ಮೊಗಲರ ಕಾಲದ–ರಾಜಸ್ಥಾನೀ, ಕಾಂಗಡಾ ಮತ್ತು ಮರಾಠಾ ಶೈಲಿಯ ಹಲವು ಪ್ರಕಾರದ ದೀಪಗಳು ಸಿಗುತ್ತವೆ.

ಶಿಲ್ಪಕಲೆಯಲ್ಲಿಯೂ ದೀಪದ ಪ್ರಿಯ ವಿಷಯಗಳಿವೆ. ಪ್ರಾಚೀನ ಅಮರಾವತಿ ಮತ್ತು ಕಿ. ಶ. ೨ನೇ ಶತಕದ ಬೋರ್ ಬಂದರ್‌ನ ಮೂರ್ತಿಕಲೆಯಲ್ಲಿ ಹಲವಾರು ದೀಪಗಳ ಮಾದರಿಗಳು ಕಾಣಸಿಗುತ್ತವೆ.

ಬೌದ್ಧ ಧರ್ಮದ ಪೌರಾಣಿಕ ಕಥೆಗಳಲ್ಲಿ ವರ್ಣಿತವಾದ ರಾಣಿ ಮಹಾಮಾಯೆಯ ಎದುರಿಗೆ ಉರಿಯುವ ದೀಪಗಳ ಘಟನೆಗಳಿಗೆ ಕಲ್ಲುಗಳಲ್ಲಿ ಸ್ವಪ್ನದೃಶ್ಯದ ಹೆಸರಿನಿಂದ ಶಾಶ್ವತ ಸಂಕೇತಗಳನ್ನು ಪಡಿಮೂಡಿಸಲಾಗಿದೆ.

# ಒಂದು ಗಮನಾರ್ಹ ಕೃತಿ

**ಶ್ರೀಹರಿಗುರುಭಜನೆ**

ಪ್ರಥಮಭಾಗ – ದೇವತಾಕಕ್ಷೆ

ಸೀತಾರಾಮದಾಸ.

ಬೆಲೆ: ರೂ 2/- ಪುಟ: VI + 34

ಪ್ರಾಪ್ತಿ ಸ್ಥಾನ.–388, 6 ನೇ ಮೇನ್
ನರಸಿಂಹರಾಜಾ ಕಾಲೋನಿ
ಬೆಂಗಳೂರು–560019.

ಸಾಹಿತ್ಯ–ಸಂಗೀತ–ಎಂಬ ಕಲಾಯುಗ್ಮಗಳ ಮಧುರ ಮಿಲನವೇ ದಾಸಸಾಹಿತ್ಯ. ಆದುದರಿಂದಲೇ ಪುರಂದರದಾಸರನ್ನು "ಕರ್ಣಾಟಕ ಸಂಗೀತ ಪಿತಾಮಹ" ಎಂಬುದಾಗಿ ಕರೆದರು. ನಾದತನ್ಮಯತೆ, ತನ್ಮೂಲಕ ಪರಬ್ರಹ್ಮೋಪಾಸನೆ ದಾಸರ ಸಾಹಿತ್ಯದಲ್ಲಿ ಕಂಡುಬರುತ್ತದೆ. ನವವಿಧ ಭಕ್ತಿಭರನಿರ್ಭರತೆಯಿಂದ ಭಗವಂತನ ಪ್ರೇಮರೂಪದ ಸಾಕ್ಷಾತ್ಕಾರದಿಂದ ದಾಸ ವಾಙ್ಮಯ ತುಂಬಿತುಳುಕುತ್ತಿದೆ. ಮಾನವ ಜನ್ಮದ ಸಾಫಲ್ಯಕ್ಕೆ ಅಡ್ಡಿ ಬರುವ ವಿಚಾರಗಳತ್ತ ದಾಸರು ಕಟುಟೀಕೆಗೈದುದಿದೆ. "ಭಕ್ತಿರೇಕಾ ಗರೀಯಸೀ" "ಭಕ್ತಿಃ ಕಿಂ ನ ಕರೋತ್ಯಹೋ" ಎಂದಂತೆ ಮತ್ತು ಭಕ್ತಿ ಕಂಪಿತನಾದ ಭಗವಂತನ ಆರಾಧನೆಗೆ ನಾಮ ಸಂಕೀರ್ತನೆಯೇ ಕಲಿಯುಗದಲ್ಲಿ ಪರಮೋಚ್ಚ ಸಾಧನ ಎಂಬುದನ್ನು ಭಕ್ತರು ಸಾಧಿಸಿ ತೋರಿಸಿದ್ದಾರೆ. "ನಾಮ ಸಂಕೀರ್ತನೆ ಅನುದಿನ ಮಾಳ್ಪಗೆ ನರಕ ಭಯಗಳುಂಟೇ?" ಎಂಬುದೇ ಅವರ ಪ್ರಶ್ನೆ. "ಕಲಿಯುಗದಿ ಸ್ಮರಣಲೇಸು" ಎಂದಂತೆ, ಸ್ಮರಣೆ, ಭಜನೆ, ಸ್ತೋತ್ರಗಳು ಸರ್ವರಿಗೂ ಅಭೀಷ್ಟಪ್ರದಗಳು. 'ನಾಲಗೆಗೆ ಭೂಷಣ ಹರಿನಾಮವು' 'ಭೂಷಣಕೆ ಭೂಷಣ ಇದು ಭೂಷಣ'–"ಹರಿನಾಮಸ್ಮರಣೆಯೇ ನವರತ್ನವಿಲ್ಲಿ" ಎನ್ನುವ ಸೀತಾರಾಮದಾಸರ ಮಾತು ದಾಸ ಸಾಹಿತ್ಯದ ಭೂಷಣ ಪ್ರಜ್ಞೆಯನ್ನು ಸಾರುತ್ತಿದೆ. ಕನಕದಾಸರು "ಕೊಡಪಾಲು ಪುಳಿವೆರೆದಳಿವುದಲ್ಲದೆ ಪಾಲ್ಗಡಲು ನಾಶವನೈದುವುದೆ ಬಡವಂಗೆ ಕೃತಿದೋಷವಲ್ಲದೆ ಬೊಮ್ಮನ ಪಡೆದಾತಗೇತರ ದೋಷ" ಎಂದಿದ್ದಾರೆ.

ಶ್ರೀಹರಿ – ಗುರು ಭಜನೆ–ತಾರತಮ್ಯೋಕ್ತ ಸ್ತೋತ್ರಪದಗಳು (ಪ್ರಥಮಭಾಗ–ದೇವತಾಕಕ್ಷೆ) ಎಂಬ ಕಿರು ಹೊತ್ತಗೆಯಲ್ಲಿ ೪೯ ಸ್ತೋತ್ರಪದಗಳಿವೆ. ಎಲ್ಲ ಪದಗಳಿಗೂ ರಾಗ ತಾಳ ನಿರ್ದೇಶನಗಳಿವೆ. ಪದ್ಯಗಳು ಸರಳ–ಸುಂದರವಾಗಿವೆ ಎಲ್ಲ ಪದ್ಯಗಳಲ್ಲೂ ದಾಸರ 'ಮುದ್ರೆ'ಯಾದ "ಸೀತಾರಾಮ ವಿಠಲ" ಎಂಬ ಅಂಕಿತವಿದೆ. ಖಂಡಪ್ರಾಸ ನಿಯತವಾಗಿಯೂ ಬಹುತೇಕ ಅಂತ್ಯಪ್ರಾಸ ಘಟಿತವಾಗಿಯೂ ಹಾಡುವುದಕ್ಕೆ ಭಜಿಸುವುದಕ್ಕೆ ತಕ್ಕವುಗಳಾಗಿಯೂ ಇವೆ. "ಪ್ರಾಸದಲ್ಲಿ ಲೋಪವಿಲ್ಲ. ಅಲಂಕಾರೋಕ್ತಿಗಳಲ್ಲಿ ಅಸಾಂಗತ್ಯವಿಲ್ಲ. ರಸಪುಷ್ಟಿಯಲ್ಲಿ ಕೊರತೆಯಿಲ್ಲ. ಹೃದಯಾಂತರಾಳದಿಂದ ಮಿಡಿಯುವ ಭಾವೋದ್ವೇಗಗಳು ಕೃತಿಗಳಲ್ಲಿ ಪ್ರತಿ ಸ್ಪಂದಿಸುತ್ತಿವೆ" ಎನ್ನುವ ವೆಂಕಟೇಶ ವಿಠಲ ದಾಸರ ಮಾತುಗಳಿಗೆ ನಾವೂ ಒಪ್ಪಿಗೆಯ ಸಹಿ ಹಾಕುತ್ತೇವೆ. ಹರಿದಾಸರ ಸಂಪ್ರದಾಯಬದ್ಧ ಜಾಡಿನಲ್ಲೇ ಮುನ್ನಡೆದು ಔಚಿತ್ಯಪೂರ್ಣವಾದ ಅಭಿನವಾಭಿಪ್ರಾಯಗಳನ್ನು ಪ್ರಕಟಿಸಿ ತಮ್ಮ ಕಾರ್ಯದಲ್ಲಿ ಕೃತಾರ್ಥರಾದ ಸೀತಾ ರಾಮದಾಸರು ದಾಸಸಾಹಿತ್ಯಾಭೀಪ್ಸುಗಳಿಗೆ ವಂದ್ಯರಾಗಿದ್ದಾರೆ.

ಈ ಚಿಕ್ಕಕೃತಿಯಲ್ಲಿ–ದೇವತಾ ಕಕ್ಷದಲ್ಲಿ – ಶ್ರೀ ಗಣಪತಿ ದೇವ, ಶ್ರೀ ಪಾರ್ವತೀ ದೇವಿ, ಶ್ರೀ ತುಲಸೀ ದೇವಿ, ಶ್ರೀ ಮಹರುದ್ರದೇವ, ಶ್ರೀ ಶೇಷದೇವ, ಶ್ರೀಗರುಡ ದೇವ, ಶ್ರೀಭಾರತೀದೇವಿ, ಶ್ರೀ ಸರಸ್ವತೀದೇವಿ, ಶ್ರೀಮಾರುತಾತ್ಮಜ, ಶ್ರೀ ಮಹಾಲಕ್ಷ್ಮೀ ದೇವಿ, ಶ್ರೀ ಮನ್ನಾರಾಯಣ–ಶ್ರೀಹರಿ, ಶ್ರೀ ವೇಂಕಟೇಶ್ವರ ಸ್ತೋತ್ರಗಳೆಂಬ ಶೀರ್ಷಿಕೆಗಳಲ್ಲಿ ೪೯ ಕೀರ್ತನೆಗಳಿವೆ. ಮಾಧ್ವಸಂಪ್ರದಾಯದ ತತ್ತ್ವಗಳನ್ನಿಲ್ಲಿ ಚಿತ್ರಿಸಲಾಗಿದೆ. ವಾಯುವಿನ ಅವತಾರತ್ರಯವೆಂದು ನಂಬುವ ಹನುಮ, ಭೀಮ, ಮಧ್ವಾಚಾರ್ಯರ ಸ್ತುತಿಗಳು (೧೫, ೧೬) ವಿಶಿಷ್ಟವಾಗಿವೆ. ಇದು "ಹನುಮದ್ಭೀಮ ಮಧ್ವಾಖ್ಯಾಸ್ತ್ರಯೋ ವಾಯೋಃ ಸುತಾ ಇವೇ" (ಬ್ರಹ್ಮಾಂಡ ಪುರಾಣದ ಮುಖ ಕಾಂಡ ಅ. ೨೮) ಎನ್ನುವ ಮಾತನ್ನು ಸಮರ್ಥಿಸುತ್ತದೆ. ಭಕ್ತನ ಆರ್ತಭಾವನ 'ಬಾರೋ ಬೇಗನೆ ಸ್ವಾಮಿ ರಾಮಚಂದ್ರ' (೨೬) 'ನಿನ್ನನೇ ನಂಬಿರುವೆ ನಿನ್ನ ಭಜಿಸುವ ಭಾಗ್ಯ' (೩೨) ಎಂಬಲ್ಲಿನ ಅನ್ಯಥಾ ಶರಣಾಗತಿರ್ನಾಸ್ತಿ ಎನ್ನುವ ಮನೋಭಾವ ಸುಂದರವಾಗಿದೆ. 'ಸಂಕಟ ಬಂದಾಗ 'ವೆಂಕಟರಮಣ' ಎನ್ನುವ ಭಾವ ಪದ್ಯ ೪೨ ರಲ್ಲಿ ಮೂಡಿ ಬಂದಿದೆ. 'ಶ್ರೀಭಾರತೀದೇವಿ' ಎನ್ನುವ ೮ ನೆಯ ಪದ್ಯ ವಿಶಿಷ್ಟರೀತಿಯದ್ದಾಗಿದ್ದು ಹೃದ್ಯವಾಗಿದೆ. ಕೃತಿಯುದ್ದಕ್ಕೂ ಭಾವುಕಜನ ಮನೋಹರಗಳಾದ ಪದ್ಯಗಳ ಶ್ರೇಣಿಯನ್ನು ಕಾಣಬಹುದಾಗಿದೆ. ೪೯ ನೆಯ ಪದ್ಯದಾದಿ ಪದಗಳನ್ನು ಸೇರಿಸಿದರೆ "ಶುಭ ಮಂಗಳ ನಿತ್ಯ ಜಯ ಮಂಗಳ ಶ್ರೀಹರಿಗೆ ಸೀತಾರಾಮ ವಿಠಲ" ಎನ್ನುವ ಮಂಗಳವಾಚಕವು ಲಭಿಸುತ್ತದೆ. ಕೊನೆಗೆ ಕೃತಿ ಶ್ರೀ ಕೃಷ್ಣಾರ್ಪಣಮಸ್ತು ಎಂಬ ಭಕ್ತಾಭೀಪ್ಸೆಯೂ ಇದೆ.

ಕೃತಿಯಲ್ಲಿ ಅರ್ಥೈಸಲು ತೊಡಕೆನಿಸುವ ಪದ್ಯ ೧೧ ರಲ್ಲಿ 'ಶುದ್ಧ ನೀನಳಿ ರುಷ್ಟ' 'ಮಾನವು ಮಣಿಮಂತ ತನವು ತುಂಬಿದ ಭ್ರಾಂತ'; (ಪದ್ಯ ೨೩ ರಲ್ಲಿ ೨ ನೆಯ ಕೀರ್ತನೆ;) ಗಳಿವೆ. ದೋಷಗಳೆನ್ನಿಸುವ–ವಸುಧಿಜೆಯನು ಗೆದ್ದ (ಪ ೨೭) (ಇದು 'ವಸುಧಾತ್ಮಜೆಯ ಗೆದ್ದ' ಎಂದಾದರೆ ಶುದ್ಧ) ಪದ್ಯ ೩೩ ರಲ್ಲಿ ಎರಡು ಸಲ ಬಂದಿರುವ 'ಮುರುಳಿ' ಎಂಬ ಪದ ಮುರಳಿ ಎಂದಾಗ ಬೇಕು. ಪದ್ಯ ೩೬–೨ ರ ಎರಡನೆಯ ಸಾಲು 'ತುಂಬಿರುವರೋಗವನು ಕಳೆದು' ಎಂದಿದೆ; ಅದಕ್ಕೆ ರಾಗ ತಾಳ ಸೇರಲು 'ತನುವಿಂದ' ಎಂದು ಸೇರಿಸಿ ಕೊಳ್ಳಬೇಕು, ಪದ್ಯ ೪೦ ರಲ್ಲಿ 'ರಸನಕಮ್ಮತವಾಗಿ' ಎಂಬುದು ರಸನೆಗಮ್ಮತವಾಗಿ' ಎಂದಾಗಬೇಕು. ಪದ್ಯ ೪೨ ರಲ್ಲಿ ೨ ರ ಮೂರನೆಸಾಲು 'ಹಿತವಾಗುವುದು' ಎಂಬ ಪದದ ಬದಲು 'ಹಿತವಹುದು' ಎಂದಿದ್ದರೆ ಲಯ, ತಾಳ, ಶುದ್ಧ, ಹಾಡಲೂ ಅನುಕೂಲ. ಇನ್ನು ತಿದ್ದಿದರೂ ಉಳಿದ ಮುದ್ರಣ ದೋಷಗಳು ಸಣ್ಣವು ಕೆಲವು ಉಳಿದಿವೆ.

ದಾಸಸಾಹಿತ್ಯ ಶ್ರೇಣಿಗೆ ಇದೊಂದು ಗಮನಾರ್ಹ ಕೊಡುಗೆ. ಇತರ ಕಕ್ಷೆಗಳೂ ಶ್ರೀಸೀತಾರಾಮ ದಾಸರಿಂದ ರಚಿತವಾಗಿ ಬೆಳಕು ಕಾಣಲಿ. ಕನ್ನಡ ಸಾಹಿತ್ಯ ಕರ್ಣಾಟಕ ಸಂಗೀತ ತನ್ಮೂಲಕ ಶ್ರೀಮಂತವಾಗಲಿ "ಭಕ್ತಿಃ ವೃದ್ಧಿಂ ಕರ್ನಾಟಕೇ ಗತಾ" ಎಂಬ ಮಾತು ಸಾರ್ಥಕವಾಗಲಿ "ಭಕ್ತಿಃ ಸರ್ವಾರ್ಥಸಾಧಿನೀ" ಆಗಿ ಚಿರಕಾಲ ಬಾಳುತ್ತಿರಲಿ ಇತಿ ಶುಭಂ.

—ಕೆ. ಸುಬ್ರಹ್ಮಣ್ಯಭಟ್ಟ

(16ನೇ ಪುಟದಿಂದ)

ಬಟ್ಟೆ ಬತ್ತಲೆ ನಿಂತು ಎತ್ತಿಕೊ ಎಂದಳುತಾನೆ
ಶ್ರೇಷ್ಠ ಕೇಜಿಯನ್ನು ಹತ್ತಿಸೆಂದಳುತಾನೆ
ತೊಟ್ಟಿಲೊಳಗೆ ಮಲಗಲೊಲ್ಲನು ಮುರವೈರಿ
ಸೃಷ್ಟಿಯೊಳು ಪುರಂದರವಿಠಲ ಕರೆಯುತಾನೆ

ಈ ಕೀರ್ತನೆಯಲ್ಲಿ ಮೊದಲಸಾಲಿನಿಂದ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಅವತಾರದ ಕಥೆಗಳನ್ನು ಅನುಕ್ರಮವಾಗಿ ಸೂಚಿಸಲಾಗಿದೆ. ಆದರೆ ಈ ಅವತಾರಗಳಲ್ಲಿನ ಘಟನೆಗಳನ್ನು ಸಾಮಾನ್ಯವಾಗಿ ಮಕ್ಕಳು ರೋದಿಸಲು ಕಾರಣವಾಗಬಹುದಾದ ಘಟನೆಗಳೊಡನೆ ಸಮೀಕರಿಸಿರುವುದು ಪುರಂದರ ಪ್ರತಿಭೆಯ ಫಲವೆನ್ನಬಹುದು. ಹರಿದಾಸರು ದಶಾವತಾರಗಳ ಕಥೆಯನ್ನು ಒಂದೇ ಕೀರ್ತನೆಯಲ್ಲಿ ಅಡಗಿಸಿ ಹೇಳುವುದು ಒಂದು ವೈಶಿಷ್ಟ್ಯ. ಪ್ರತಿಯೊಂದು ಕಥೆಯು ಭಾಗವನ್ನೂ ನಾನಾ ದೃಷ್ಟಿಕೋನಗಳಿಂದ ಕಂಡು ಭಗವಂತನ ಗುಣಗಳನ್ನು ವರ್ಣಿಸಿರುವ ನೂರಾರು ದಶಾವತಾರ ಸ್ತುತಿಗಳು ಕೀರ್ತನ ರೂಪದಲ್ಲಿ ದೊರೆಯುತ್ತದೆ. ಆದರೆ ಪುರಂದರದಾಸರು ವಾತ್ಸಲ್ಯಭಾವ ಪ್ರಕಟಣೆಗೆ ಈ ದಶಾವತಾರದ ಕಥೆಗಳನ್ನು ಬಳಸಿಕೊಂಡಿರುವ ರೀತಿ ಅನ್ಯ ಹರಿದಾಸರಿಗಿಂತ ಭಿನ್ನಕ್ರಮವಾಗಿದೆ. ಒಂದೇ ಕ್ರಿಯೆಯನ್ನು ಮಗುವಿನ ರೋದನ ಕ್ರಿಯೆ ಹಾಗೂ ಹಠಮಾರಿತನ, ಕೋಪ, ದುಃಖ ಮೊದಲಾದ ಭಾವಗಳನ್ನು ಪ್ರಕಟಿಸಲು ಬಳಸಿರುವ ರೀತಿಯನ್ನು ನೋಡಿದಾಗ ದಾಸರ ಪ್ರತಿಭೆಗೆ ತಲೆದೂಗುವಂತಾಗುತ್ತದೆ.

ಮತ್ಸ್ಯಾವತಾರದಲ್ಲಿ ಭಗವಂತ ನೀರಿನಲ್ಲಿದ್ದ ಅಸುರನ ಸಂಹಾರ ಮಾಡಿದ ಘಟನೆಯನ್ನು ಆಧರಿಸಿ, ದಾಸರು 'ಮೈಯೊರಸು–ಚಳಿಯಾಗುತ್ತಿದೆ' ಎಂದು ತೊಟ್ಟಿಲಲ್ಲಿ ಮಲಗಿರುವ ಕೃಷ್ಣ ಅಳುತ್ತಿರುವನೆಂದು ಒಮ್ಮೆ ವಿವರಿಸಿದರೆ, ಅದೆ ಕೃಷ್ಣ ಹಠ ಮಾರಿತನವನ್ನು ಪ್ರಕಟಿಸಿದಾಗ ಮತ್ಸ್ಯಾವತಾರದ ಇದೇ ಘಟನೆಯನ್ನಾಧರಿಸಿ 'ಬಿಟ್ಟ ಕಂಗಳ ಮುಚ್ಚಲೊಲ್ಲನೆ' ಎಂಬ ಗೋಪಿಯರ ದೂರಿನಲ್ಲಿ ಧ್ವನಿಸುತ್ತಾರೆ. ಹಠದ ಸಂದರ್ಭದಲ್ಲಿ ಕಣ್ಣುರೆಪ್ಪೆಯಾಡಿಸದೆ ಕೂಗಾಡುವುದು ಮನುಷ್ಯನ–ಮಗುವಿನ ಸಹಜ ಸ್ವಭಾವ; ಮೀನಿಗೆ ರೆಪ್ಪೆಯೇ ಇಲ್ಲದಿರುವುದರಿಂದ ಈ ವಾಕ್ಯ ಆ ಅವತಾರದ ಕಥೆಗೂ ಕೊಂಡಿ ಕೂಡಿಸುತ್ತದೆ. ಇದೆ ರೀತಿ ದಾಡೆಯಿಂದ ಭೂಮಿಯನ್ನೆತ್ತಿ ಹಲ್ಲ ನೋಯುತ್ತಿದೆ ಎಂದು ಕೃಷ್ಣ ಅಳುತ್ತಿರುವುದಾಗಿ ದುಃಖ ಭಾವನೆಯ ಪ್ರಕಟಣೆಗೆ 'ವರಾಹಾವತಾರದ ಕಥೆಯನ್ನು ಬಳಸಿದಂತೆ, ಹಠದ ಕೃಷ್ಣನ ಚಿತ್ರಣಕ್ಕೆ, "ಸಿಟ್ಟಿಂದ ಕೋರೆಯ ತೋರ್ಪನೆ' ಎಂದ ಇದೇ ಅವತಾರದ ಸಂಗತಿಯ ನೆರವನ್ನು ಪಡೆಯುವರು. ಇದರಂತೆ ನಾನಾ ಭಾವಗಳಿಗೆ ದಶಾವತಾರದ ಇತರ ಕಥೆಗಳನ್ನು ಪುರಂದರದಾಸರ ಬಳಸಿ ಯಶೋದೆ ಮತ್ತು ಗೋಪಿಯರ ವಾತ್ಸಲ್ಯ ವರ್ಷದ ಸ್ವರೂಪವನ್ನು ಹಿಡಿದಿಡುವ ಪ್ರಯತ್ನದಲ್ಲಿ ಯಶಸ್ವಿಯಾಗಿರುವರು.

ಪುರಂದರದಾಸರು ಕೃಷ್ಣನ ಬಾಲ್ಯಲೀಲೆ ಸಂಬಂಧಿಸಿದ ಸುಮಾರು ಎಪ್ಪತ್ತಾರು ಕೀರ್ತನೆಗಳನ್ನು ರಚಿಸಿರುವರು. ಈ ಕೀರ್ತನೆಗಳಲ್ಲಿ ವಾತ್ಸಲ್ಯಭಾವ ಹೆದ್ದೊರೆಯಾಗಿ ಹರಿದಿದೆ. ಭಗವದ್ಭಕ್ತಿಯ ವಿಶಿಷ್ಟ ಪ್ರಕಟಣೆಯ ಈ ರಚನೆಗಳು ಪುರಂದರದಾಸರ ವಿಷ್ಣು ಭಕ್ತಿ ಮೂಲ ಸಾಮಗ್ರಿಯಾಗಿರುವಂತೆ ಭಾಗವತ ಗ್ರಂಥದ ಹತ್ತನೆಯ ಸ್ಕಂಧದ ಕಥಾಭಾಗವೂ ಮೂಲಪ್ರೇರಣೆಯಾಗಿದೆ ಎನ್ನಬಹುದು, ಭಾಗವತ ಗ್ರಂಥದಲ್ಲಿ ಉಕ್ತವಾಗಿರುವ ಅನೇಕ ಕಥೆಗಳನ್ನು ಪುರಂದರದಾಸರು ಈ ಕೃತಿಗಳನ್ನು ರಚಿಸುವಲ್ಲಿ ಬಳಸಿಕೊಂಡಿದ್ದರೂ ದಾಸರ ಭಾಷೆ–ಭಾವ–ಪ್ರತಿಭೆಯ ಕಾರಣಗಳಿಂದ ಇವು ಸ್ವೋಪಜ್ಞತೆಯುಳ್ಳ ರಚನೆಗಳಾಗಿ ಹೃದಯವನ್ನು ಸ್ಪಂದಿಸುತ್ತದೆ. ಪುರಂದರದಾಸರ ಈ ವಾತ್ಸಲ್ಯಭಾವ ಕೃತಿಗಳಲ್ಲಿ, ಅನ್ಯ ರಚನೆಗಳಲ್ಲಿ ಕಾಣುವ ಭಾಷಾ ಸೌಂದರ್ಯವೂ ಮಿಂಚಿದೆ ಈ ಕೃತಿಗಳಲ್ಲಿ ಮಾತೃ ಹೃದಯದ ದರ್ಶನವನ್ನು ಯಶೋದೆಯ ಪಾತ್ರದಲ್ಲಿ ಕಾಣಬಹುದಾದರೆ ಮಕ್ಕಳನ್ನು ಪ್ರೀತಿಸಿ ಅವರ ಆಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಆನಂದಿಸುವ ಜನರ ಪರಿಯನ್ನು ಗೋಪಿಯರ ಪಾತ್ರದಲ್ಲಿ ಕಾಣಬಹುದಾಗಿದೆ.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | |
|---|---|---|---|---|
| 1. | ದರ್ಶನ: | ವಿಶೇಷ ಪ್ರವೇಶ: ಪ್ರತಿಯೊಬ್ಬರಿಗೆ | ರೂ | 2–00 |
| 2. | ಅರ್ಜಿತ: | ಕಾಲಸೋಲ 1) ಪೊಂಗಲ್ | ರೂ | 55–00 |
| | | 2) ಪುಳಿಯೋಗರೆ | ರೂ | 50–00 |
| | | 3) ದಧ್ಯೋದನ | ರೂ | 40–00 |
| | | 4) ಕೇಸರಿಬಾತ್ | ರೂ | 85–00 |
| | | 5) ಸಕ್ಕರೆ ಪೊಂಗಲ್ | ರೂ | 65–00 |
| | | 6) ದೋಸೆ | ರೂ | 35–00 |
| | | 7) ಶಾಕರಬಾತ್ | ರೂ | 90–00 |
| | | 8) ಸೀರಾ | ರೂ | 155–00 |
| 3. | ಸೇವೆಗಳು: | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | 2) ಸಹಸ್ರನಾಮಾರ್ಚನೆ | ರೂ | 6–50 |
| | | 3) ಅರ್ಚನೆ | ರೂ | 1–00 |
| | | 4) ಆರತಿ | ರೂ | 0–50 |
| | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | 7) ತಿರುಚ್ಚಿ ಉತ್ಸವ | ರೂ | 63–00 |
| | | 8) ಗಜವಾಹನ | ರೂ | 32–00 |

—ಪೇಷ್ಕಾರ್

## ಗೃಹಲಕ್ಷ್ಮಿ

# ತಪತಿ

ಸೂರ್ಯನಿಗೆ ರಾಜ್ಞಿ, ಸಂಜ್ಞೆ, ಪ್ರಭೆ ಎಂಬ ಮೂವರು ಪತ್ನಿಯರು ಇದ್ದರು. ರಾಜ್ಞಿಯು ರೇವತನನ್ನೂ, ಪ್ರಭೆಯು ಪ್ರಭಾತನನ್ನೂ, ಸಂಜ್ಞೆಯು ಮನುವನ್ನೂ, ಯಮ–ಯಮನೆ ಎಂಬ ಅವಳಿಮಕ್ಕಳನ್ನೂ ಹೆತ್ತರು.

ಇವರಲ್ಲಿ ಸಂಜ್ಞೆ ಎನ್ನುವ ಪತ್ನಿಯು ಬಹಳ ಕೋಮಲಳಾದವಳು. ಅವಳು ಸೂರ್ಯನ ದೇಹತಾಪವನ್ನು ತಡೆಯಲಾರದಾದಳು. ಆದುದರಿಂದ ತನ್ನಂತೆಯೇ ಇರುವ ಓರ್ವ ತರುಣಿಯನ್ನು ಸೃಷ್ಟಿಸಿ, ಛಾಯೆಯೆಂದು ಹೆಸರಿಟ್ಟು, ತನ್ನ ಪತಿಯೊಂದಿಗೆ ಸಂಸಾರ ಮಾಡಿಕೊಂಡಿರಬೇಕೆಂದೂ, ತನ್ನ ಮಕ್ಕಳಿಗೆ ಮಾತೃವಾತ್ಸಲ್ಯವನ್ನು ನೀಡುವಂತೆಯೂ ತಿಳಿಸಿ ತನ್ನ ಗುಟ್ಟನ್ನು ರಟ್ಟು ಮಾಡದಂತೆ ಎಚ್ಚರಿಸಿ, ತಪಸ್ಸು ಮಾಡಲು ಹೊರಟುಹೋದಳು.

ಸೂರ್ಯನಿಗೆ ಈ ವ್ಯತ್ಯಾಸವೇನೂ ತಿಳಿಯಲಿಲ್ಲ. ಛಾಯಳೊಂದಿಗೆ ಅವಳನ್ನು ಸಂಜ್ಞೆಯೆಂದೇ ತಿಳಿದು ಸಂಸಾರ ಮಾಡಿಕೊಂಡಿದ್ದನು. ಇದರ ಪರಿಣಾಮವಾಗಿ ಛಾಯಳಿಗೆ ವೈವಸ್ವತ ಮನುವಿನಂತೆಯೆ ಇರುವ ಸಾವರ್ಣಿ ಮನುವೂ, ಶನೈಶ್ಚರನೂ ಹಾಗೂ ತಪತಿಯೂ ಜನಿಸಿದರು.

ಛಾಯೆಯು ತನ್ನ ಮಕ್ಕಳನ್ನು ಹೆಚ್ಚು ಅಕ್ಕರೆ, ಪ್ರೀತಿಗಳಿಂದಲೂ ಸವತಿ ಮಕ್ಕಳನ್ನು ಅಸಡ್ಡೆಯಿಂದಲೂ ನೋಡುತ್ತಿದ್ದಳು. ತನ್ನ ಅಕ್ಕನಾದ ಯಮನೆಯನ್ನು ತಾಯಿಯು ನಿರ್ಲಕ್ಷ್ಯದಿಂದ ಕಾಣುವುದನ್ನು ಸಹಿಸದ ತಪತಿಯು ಬಹುವಾಗಿ ನೊಂದಳು. ಅಂತರ್ಯವನ್ನು ಅರಿಯದ ಅವಳು ಬೇಸರಗೊಂಡ ಮನವನ್ನು ಸಾಂತ್ವನಗೊಳಿಸಿಕೊಳ್ಳಲು ಒಂದು ಉದ್ಯಾನವನ್ನು ಪ್ರವೇಶಿಸಿ, ಚಿಂತಿಸುತ್ತಾ ಕುಳಿತಳು.

ಅದೇ ಸಮಯದಲ್ಲಿ ಅಲ್ಲಿಗೆ ಸಂವರಣ ಎನ್ನುವ ರಾಜನು ಬಂದನು. ಇವನು ಪುರುವಂಶದ ಅಜಮೀಢನ ಸಂತತಿಯವನಾದ ಯಕ್ಷರಾಜನ ಮಗ, ಅಯೋಧ್ಯಾಧಿಪತಿ. ಇವನು ಬೇಟೆಯಾಡಲು ಅರಣ್ಯದ ಕಡೆ ಹೊರಟವನು, ಮುಂದುವರೆದಂತೆ ತೀವ್ರಗಾಮಿ ಅಶ್ವದ ಕಾರಣ ತನ್ನ ಸಹಚರರಿಂದ, ಪರಿಚಾರಕರಿಂದ ಬೇರೆಯಾದ, ದಾರಿ ತಪ್ಪಿದ.

ಬಹಳ ದೂರ ಗತಿಸಿದ ಮೇಲೆ ಅಲ್ಲಿ ಒಂದು ಉದ್ಯಾನವನವನ್ನು ಕಂಡು ಆಶ್ಚರ್ಯಗೊಂಡ. ಅದಕ್ಕಿಂತಲೂ ಆಶ್ಚರ್ಯಕರವಾದ ವಿಷಯವೆಂದರೆ ದಿವ್ಯರೂಪದ, ಅನುಪಮ ಸೌಂದರ್ಯರಾಶಿಯನ್ನು ಕಂಡದುದು.

ತಪತಿಯನ್ನು ಕಂಡ ಕೂಡಲೆ, ಮಹಾರಾಜನು ತನ್ನನ್ನು ತಾನೇ ಮರೆತ. ಅವಳ ಸೌಂದರ್ಯದಿಂದ ಆಕರ್ಷಿತನಾಗಿ, ಮುಗ್ಧನಾಗಿ, "ಎಲೈ ಸುಂದರಿ, ನೀನ್ಯಾರು? ದೇವ, ದೈತ್ಯ, ಗಂಧರ್ವ ಹಾಗೂ ನಾಗಲೋಕದಲ್ಲೂ ನಿನ್ನ ಸಮವಾದ ಅಪೂರ್ವ ಸೌಂದರ್ಯವತಿಯರು ದೊರೆಯಲಾರರು. ಹಾಗಿರುವಾಗ ಮರ್ತ್ಯಲೋಕದಲ್ಲಿ ನಿನ್ನಂತಹ ಲಾವಣ್ಯವತಿಯನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ನೀನು ದಿವ್ಯ ರತ್ನಾಲಂಕಾರ ಭೂಷಿತಳಾದರೂ ಅವು ನಿನ್ನ ಕಾಂತಿಯಿಂದ, ಶೋಭೆಯಿಂದ ಭೂಷಿತವಾಗಿವೆ. ನಾನು ಮಹಾರಾಜ 'ಪೌರವನ' ಮಗ. ಪ್ರಪಂಚದಲ್ಲಿ ನನ್ನನ್ನು ಯಾವ ಹೆಣ್ಣೂ ಇದುವರೆವಿಗ ಆಕರ್ಷಿಸಿಲ್ಲ. ನಾನು ನಿನ್ನ ಪರಿಚಯ ಪಡೆಯಲು, ಮಧುರ ವಾಣಿಯನ್ನು ಆಲಿಸಲು ಉತ್ಸುಕನಾಗಿದ್ದೇನೆ ನೀನು ನಿನ್ನ ಪರಿಚಯವನ್ನು ತಿಳಿಸು." ಎಂದು ಪ್ರಾರ್ಥಿಸುವ ದನಿಯಲ್ಲಿ ಹೇಳಿ, ಅವಳ ಕಡೆ ನಡೆದ.



ಪರಿಚಯವೇ ಇಲ್ಲದ ಇಂತಹ ಯುವಕನನ್ನು ಮಾತನಾಡಿಸಲು ಇಷ್ಟವಿಲ್ಲದ ತಪತಿಯು ತನ್ನ ಕಡೆ ಸಂವರಣನು ಬರುತ್ತಿರುವುದನ್ನು ಕಂಡು ಅವಳು ಅಂತರ್ಧಾನಳಾದಳು.

ತನ್ನ ಮನವನ್ನು ತುಂಬಿದ್ದ ಆ ಸೌಂದರ್ಯರಾಶಿಯು ಇದ್ದಕ್ಕಿದ್ದಂತೆ ಕಣ್ಮರೆಯಾಗಲು, ಅದನ್ನು ತಡೆದುಕೊಳ್ಳಲಾರದವನಾಗಿ ಮಹಾರಾಜ ಸಂವರಣನು ಪ್ರಜ್ಞಾಹೀನನಾಗಿ ಭೂಮಿಯ ಮೇಲೆ ಬಿದ್ದುಬಿಟ್ಟ. ಕಿರೀಟವು ಅಷ್ಟು ದೂರ ಹೋಗಿ ಬಿದ್ದಿತು. ತಲೆಗೂದಲು ಚೆಲ್ಲಾಪಿಲ್ಲಿಯಾಯಿತು. ದೀರ್ಘ ಶ್ವಾಸಗಳನ್ನು ಬಿಡತೊಡಗಿದ.

ತಾನು ಮರೆಯಾಗುವಿಕೆಯು ಮಹಾರಾಜನ ಮೇಲೆ ಇಂತಹ ಬಲವಾದ ಪರಿಣಾಮವನ್ನು ಉಂಟುಮಾಡುತ್ತದೆ ಎಂದು ತಪತಿಯು ಊಹಿಸಿರಲಿಲ್ಲ. ಅದು ಪ್ರಾಣಾಂತಕ ಸಮಯ. ಅವಳು ತನ್ನಿಂದ ಓರ್ವ ಅಪರಿಚಿತನ ಸಾವು ಉಂಟಾಗುವುದನ್ನು ಇಷ್ಟಪಡಲಿಲ್ಲ. ಸಕಲ ಜೀವಿಗಳ ಮೇಲೆ ಅನುಕಂಪ ತೋರುವ, ತನ್ನ ಅಕ್ಕನ ದುಃಸ್ಥಿತಿಗಾಗಿಯೇ ಮರುಗಿದ ತಪತಿಯು ಮರುಗಿದಳು. ಅವನ ಮೇಲೆ ಕರುಣೆ ತೋರುವ, ರೀತಿಯಲ್ಲಿ ಪ್ರತ್ಯಕ್ಷಳಾದಳು.

"ರಾಜನ್! ದೇವರು ನಿಮಗೆ ಒಳಿತನ್ನು ಮಾಡಲಿ! ಪೃಥ್ವಿಯ ಸರ್ವಶ್ರೇಷ್ಠ ರಾಜರಾದ ತಮ್ಮಂತಹವರಿಗೆ ಈ ರೀತಿಯಲ್ಲಿ ಅಧೀರರಾಗುವುದು ಶೋಭೆಯನ್ನು ನೀಡುವಂತಹುದಲ್ಲ!"

'ರಘುಸುತ'

ಕಣ್ಣನ್ನು ತೆರೆದು ಅವಳನ್ನು ನೋಡಿ, ಎದ್ದು ನಿಂತು ಅವಳನ್ನೇ ನೋಡುತ್ತಾ, "ಸುಂದರಿ, ನೀನು ಯಾರು. ನಿನ್ನ ಹೆಸರೇನು?" ಎಂದು ಕೇಳಿದನು.

"ನಾನು ಜಗತ್ತಿನ ಬೆಳಕಾಗಿರುವ ಭಗವಾನ್ ಆದಿತ್ಯನ ಮಗಳು. ಹಾಗೂ ಸಾವಿತ್ರಿಯ ತಂಗಿ ತಪತಿ..."

ತಪತಿಯು ಬುದ್ಧಿವಂತಳು. ಸಂವರಣನ ಹೃದಯದಲ್ಲಿ ಉಂಟಾಗುತ್ತಿರುವ ಹೋರಾಟವನ್ನು ಗುರ್ತಿಸಿದಳು. ಅವನ ಮನಸ್ಸಿನ ಭಾವವನ್ನು ಅರಿತಳು. ಅದರಿಂದ ಅದನ್ನು ಸಾಧಿಸಲು ತಾನೇ ಅವನಿಗೆ ಉಪಾಯವನ್ನು ತಿಳಿಸಿದಳು.

"ರಾಜನ್, ನಾನು ಸ್ವತಂತ್ರಳಲ್ಲ. ನನ್ನ ಮೇಲೆ ನನ್ನ ತಂದೆಯ ಅಧಿಕಾರವಿದೆ. ಇದರಿಂದ ನಿಮ್ಮನ್ನು ಕಾಣಲು, ನಿಮ್ಮೊಡನೆ ಮಾತನಾಡಲು ಸಂಕೋಚಗೊಂಡೆ. ನಿಮ್ಮ ಸದ್ಗುಣ, ಯಶಸ್ಸು, ಕುಲೀನತೆಗಳು ಜಗದ್ವಿಖ್ಯಾತವಾದವುಗಳು. ಇಂತಹ ಪುರುಷನನ್ನು ಪತಿಯನ್ನಾಗಿ ಪಡೆಯುವವಳೇ ಧನ್ಯಳು. ನೀವು ನನ್ನ ಲೋಕಪೂಜಿತ ತಂದೆಯವರನ್ನು ತಪಸ್ಸಿನಿಂದ ಸಂತುಷ್ಟಗೊಳಿಸಿ, ನನ್ನನ್ನು ಬೇಡಿ..." ಎಂದು ಪರೋಕ್ಷವಾಗಿ ತನ್ನ ಒಪ್ಪಿಗೆಯನ್ನು ಸೂಚಿಸಿ, ತನ್ನನ್ನು ಹೇಗೆ ಪಡೆಯುವುದು ಎಂಬುದನ್ನು ತಿಳಿಸಿದಳು.

ಯುವಕ, ಯುವತಿಯರು ಸಂಧಿಸಿದಾಗ, ತಮಗೆ ತಾವೇ ತಮ್ಮ ಭವಿಷ್ಯವನ್ನು ನಿರ್ಧರಿಸದೆ ಅದನ್ನು ಯಾವ ರೀತಿಯಲ್ಲಿ ತಮ್ಮ ಹಿರಿಯರಿಂದ ಪರಿಹಾರ ಪಡೆಯಬಹುದು ಎಂಬುದರ ಆದರ್ಶ ಚಿತ್ರಣವನ್ನು ಮುಂದಿನ ಜನಾಂಗಕ್ಕೆ ದಾರಿದೀಪವಾಗುವಂತೆ ವರ್ತಿಸಿದಳು. ಇದರಲ್ಲಿ ಈಕೆಯ ಹಿರಿಮೆ ಇರುವುದು. ಈ ದೃಷ್ಟಿಯಿಂದಲೇ ಈಕೆಯನ್ನು ಸತೀಮಣಿ ಎಂದು ಕರೆಯುವುದು.

ತನ್ನ ಹಿಂಬಾಲಕರಿಂದ ಮಹಾರಾಜನು ಬೇರೆಯಾಗಿ ತುಂಬಾ ಹೊತ್ತಾಗಿತ್ತು. ಅವರು ಅವನನ್ನು ಹುಡುಕುತ್ತಾ ಅಲ್ಲಿಗೆ ಇಷ್ಟರಲ್ಲಿಯೇ ಬರುವವರಾಗಿದ್ದರು. ಅದರಿಂದ ತಪತಿಯು ಅದೃಶ್ಯಳಾದಳು.

ಸ್ವಲ್ಪ ಸಮಯದ ನಂತರ ಮಹಾರಾಜನು ತನ್ನನ್ನು ತಾನು ಸಮಾಧಾನಪಡಿಸಿಕೊಂಡನು. ತಪತಿಯು ಅದೃಶ್ಯಳಾದುದನ್ನು ತಿಳಿದು, ಅವಳು ಹೇಳಿದ ಮಾತುಗಳನ್ನು ನೆನೆಸಿಕೊಂಡ. ಅವಳ ಬುದ್ಧಿಮತ್ತತೆಯನ್ನು ಮನಸ್ಸಿನಲ್ಲಿಯೇ ಮೆಚ್ಚಿದ. ತನಗೆ ದಾರಿ ತೋರಿಸಿದುದಕ್ಕೆ ಅವಳನ್ನು ವಂದಿಸಿ, ಕಾರ್ಯೋನ್ಮುಖನಾದ. ತನ್ನ ಬಳಿಗೆ ಬಂದ ಸೈನಿಕರನ್ನು ಅಯೋಧ್ಯೆಗೆ ಹಿಂತಿರುಗುವಂತೆ ತಿಳಿಸಿದ.

ಹತ್ತಿರದಲ್ಲಿನ ಸರೋವರದಲ್ಲಿ ಸ್ನಾನ ಮಾಡಿ, ಚಿತ್ತಶುದ್ಧಿಯಿಂದ ಭಗವಾನ್ ಸೂರ್ಯನಿಗೆ ಅರ್ಘ್ಯ ನೀಡಿ, ಅಂಜಲೀಬದ್ಧನಾಗಿ ಭುವನಭಾಸ್ಕರ ಮಂತ್ರವನ್ನು ಜಪಿಸಲು ಪ್ರಾರಂಭಿಸುವುದಕ್ಕೆ ಮುಂಚೆ ಗುರು ವಸಿಷ್ಠರನ್ನು ಸ್ಮರಿಸಿದ.

ಸೈನಿಕರು ಅಯೋಧ್ಯೆಗೆ ಹಿಂತಿರುಗಿ, ಎಲ್ಲ ವಿವರಗಳನ್ನು ರಾಜ್ಯಗುರು ವಸಿಷ್ಠರಿಗೆ ತಿಳಿಸಿದರು. ಅಂತೆಯೆ ಬ್ರಹ್ಮಜ್ಞಾನಿಗಳಾದ ವಸಿಷ್ಠರು ತಮ್ಮ ಶಿಷ್ಯನು ತಮ್ಮ ಪ್ರಾರ್ಥಿಸಿದುದರ ಅನುಭವವನ್ನು ಪಡೆದರು. ಅವರಿಗೆ ಎಲ್ಲ ವಿಚಾರಗಳೂ ಅವಗತವಾದುವು. ಮಹಾರಾಜನು ಉತ್ತಮ ವಿವಾಹ ಸಂತಾನಾಪೇಕ್ಷಿಯಾಗಿ, ತಪಸ್ಸು ನಡೆಸುತ್ತಿರುವುದರ ಪ್ರಾಮುಖ್ಯತೆಯನ್ನು ಅರಿತರು. ಅಂತೆಯೆ ಅವನ ತಪಸ್ಸಾಧನೆಯಲ್ಲಿ ಸಹಾಯ ಮಾಡಲು ನಿರ್ಧರಿಸಿದರು.

ರಾಜ್ಯಭಾರಕ್ಕೆ ತಕ್ಕ ವ್ಯವಸ್ಥೆಗಳನ್ನು ಮಾಡಿ, ವಸಿಷ್ಠರು ಅರಣ್ಯಾಭಿಮುಖರಾದರು. ಸಂವರಣನನ್ನು ಸಂಧಿಸಿ ಅವನನ್ನು ಸಮಾಧಾನಗೊಳಿಸಿದರು. ನಂತರ ತಮ್ಮ ಯೋಗ ಬಲದಿಂದ ಸೂರ್ಯಲೋಕವನ್ನು ತಲುಪಿದರು.

"ನಾನು ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬನು, ವಸಿಷ್ಠನೆನ್ನುವವನು!" ಎಂದು ಅವರು ತಮ್ಮ ಪರಿಚಯವನ್ನು ಹೇಳಿಕೊಂಡರು.

"ಧನ್ಯನಾದೆ ಪೂಜ್ಯರೆ!" ಎಂದು ಬೇಗ ಸೂರ್ಯನು ಎದ್ದು ನಿಂತು ಗೌರವ ಸೂಚಿಸಿ, ನಂತರ ಶಿರಸಾಷ್ಟಾಂಗ ಪ್ರಣಾಮ ಮಾಡಿದನು. ಆಸನವನ್ನು ನೀಡಿ ಪಾದ ಪ್ರಕ್ಷಾಲನ ಮಾಡಿ, ಚರಣೋದಕವನ್ನು ಪಡೆದ.

ಅವರನ್ನು ಈ ರೀತಿಯಲ್ಲಿ ಪೂಜಿಸಿದ ನಂತರ ಪಾದ ಪೀಠದ ಬಳಿ ಕರಬದ್ಧನಾಗಿ ಕುಳಿತು ಸೂರ್ಯನು ಪ್ರಾರ್ಥಿಸಿದನು "ಮಹರ್ಷಿಗಳೇ, ತಮ್ಮ ಆಗಮನವು ಸಂತೋಷ ಜನಕವಾದುದು. ಏನು ಮಾಡ ಬೇಕೆಂಬುದನ್ನು ಆಜ್ಞೆ ಮಾಡಿ, ಶಿರಸಾ ವಹಿಸುವೆನು...."

"ಭಗವನ್ ಸೂರ್ಯದೇವ! ಭೂಮಿಯ ಮೇಲೆ ಅಯೋಧ್ಯೆಯ ರಾಜನಾದ ಸಂವರಣನು ಸರ್ವಶ್ರೇಷ್ಠ ಮಾನವನಾಗಿದ್ದಾನೆ. ಅವನು ಪ್ರಜಾವತ್ಸಲನೂ ಶೂರನೂ, ಸಂಯಮಿಯೂ ಆಗಿರುವನು ಅವನು ನಿಮ್ಮ ಅನನ್ಯ ಉಪಾಸಕ. ವಿಧಿಪೂರ್ವಕವಾಗಿ, ಶುದ್ಧ ಹೃದಯದಿಂದ ನಿಮ್ಮನ್ನು ಅರ್ಚಿಸುವನು. ಹನ್ನೆರಡು ದಿನಗಳಿಂದಲೂ ಹಗಲು ರಾತ್ರಿಯೆನ್ನದೆ ನಿದ್ರಾಹಾರಗಳನ್ನು ತೊರೆದು ನಿಮ್ಮನ್ನು ಪ್ರಾರ್ಥಿಸುತ್ತಿದ್ದಾನೆ. ಆತನಿಗಾಗಿ ನಿಮ್ಮ ಕಿರಿಯ ಪುತ್ರಿ ತಪತಿಯನ್ನು ಬೇಡುತ್ತೇನೆ.'

ಸೂರ್ಯನಾರಾಯಣನು ಇದನ್ನು ಆಲಿಸಿ ಸಂತುಷ್ಟನಾದ. ನಗುಮುಖದಿಂದ ಹೇಳಿದ "ಮಹರ್ಷಿಗಳೆ! ಸಂವರಣನು ರಾಜರಲ್ಲೇ ಸರ್ವಶ್ರೇಷ್ಠನು ಹಾಗೂ ನನ್ನ ಪರಮ ಭಕ್ತನು ಎಂಬುದನ್ನು ಅರಿತಿದ್ದೇನೆ.. ತಪತಿಗೂ ಅನುರೂಪನಾದ ವರನು ದೊರೆಯದೆ, ದೇವಗಂಧರ್ವರಲ್ಲಿ ಸೂಕ್ತ ವ್ಯಕ್ತಿಯು ಸಿಗದೆ ಇದ್ದುದರಿಂದ, ನಾನೆ ಸಂವರಣನಿಗೆ ನನ್ನ ಪುತ್ರಿಯನ್ನು ಕೊಡ ಬೇಕೆಂದಿದ್ದೆ. ಈ ಸಂಬಂಧವೂ ಅನುರೂಪವಾದುದು. ತಾವು ಬಂದುದೂ ಬಹು ಸಂತೋಷದ ವಿಷಯ. ನಾನು ಪ್ರಸನ್ನನಾಗಿದ್ದೇನೆ. ತಾವು ನನ್ನ ಕನ್ಯೆಯನ್ನು ಕರೆದೊಯ್ದು, ಸಂವರಣನೊಂದಿಗೆ ವಿವಾಹವನು ನೆರವೇರಿಸಿರಿ...."

(34ನೇ ಪುಟ ನೋಡಿ

ಕಿಶೋರಜಗತ್

# ಕುರುಡ ತಿಮ್ಮನ ಕಥೆ

ಶ್ರೀನಿವಾಸನೆ ಶರಣು, ದೀನಜನ ಮಂದಾರ
ಮಾನಿನೀ ಮಾನರಕ್ಷಕನೆ ತವಪದ
ಧ್ಯಾನದಲಿ ನಿಲಿಸೆನ್ನ ಮನವ ||

ತಿಮ್ಮನೆಂಬುವನೊಬ್ಬ ಕೂರ್ಮೆಯಲ್ಲಿ ಹಾಡುವವ
ನಮ್ಮೂರಲಿದ್ದನವ ಹುಟ್ಟು ಕುರುಡ
ತಮ್ಮನೀ ಕೇಳವನ ಕಥೆಯ || ೧

ತಂದೆ ತಾಯಿಗಳಿಲ್ಲ ಬಂಧು ಬಾಂಧವರಿಲ್ಲ
ನೊಂದನಯ್ಯೋ ಎಂಬ ಜನರಿಲ್ಲ, ಕುರುಡ
ಬಂದುದನು ಅನುಭವಿಸುತಿಹನು || ೨

ತೆರೆದ ಜಾಗವನು ಕಾಣ ಅರಿಯ ಸುಖವೆಂಬುದನು
ನಿರುತಭಜನೆಯಲಿ ಇರುತಿರ್ಪನಾ
ಕುರುಡ ಮಾಡಿದ ಪುಣ್ಯದಿಂದ || ೩

ಮೂರು ದಿನಗಳಿಗೊಮ್ಮೆ ಊರು ಕೇರಿಯ ತಿರುಗಿ
ನೀರು ಅಂಬಲಿಯ ತಿರಿತಂದು ತಿಮ್ಮ
ಪಾರಣೆಯ ಮಾಡುತಿಹನು || ೪

ಇಂತಿರಲು ಒಂದುದಿನ ಚಿಂತಿಸುತ ತನ್ನಿರವ
ಸಂತೈಸಿ ಮನವ ತಿರುಪಕ್ಕೆ ಹೊರಟಾ
ಕಂತುಪಿತ ನೀನೆ ಗತಿಯೆನುತ। ೫

ಕಂಗಳಿಲ್ಲದ ಕುರುಡ ಅಂಗಳೊಣಗಿದೆ ತಾಯೆ
ತಂಗಳಂಬಲಿಯ ಕೊಡಿರಿ ನಮ್ಮೊವ್ವಾ
ರಂಗನೀವನು ನಿಮಗೆ ಸುಖವ || ೬

ಎಂದು ಕೂಗುತ ಮನೆಯ ಮುಂದೆ ನಿಂದಿರೆ ಕುರುಡ
ಬಂದು ಮನೆಯಾಕೆ ನೋಡಿ ತಾ ಮರುಕದಿ
ಎಂದಳೀ ಮಾತ ಕುರುಡನಿಗೆ || ೭

ಅಂಗಲಾಚುವೆ ಏಕೆ ತಂಗಳಿಲ್ಲವೊ ಇಂದು
ರಂಗಯ್ಯನ ತೋಪಲಿ ಹರಿಸೇವೆ ಊಟ
ಸಂಗಡಲೆ ಬಾ ನಿನಗುಂಟು || ೮

ಎನ್ನುತಲೆ ಆ ಕುರುಡ ಸಣ್ಣ ಕೋಲನು ಹಿಡಿದು
ಹೆಣ್ಣು ಮಗಳೊಡನೆ ಹೊರಟನವ ತೋಪಿಗೆ
ಹೊನ್ನು ಕಂಡಾ ಬಡವನಂತೆ || ೯

ಅಂದು ಊರಿನ ಜನರು ಮಿಂದು ಮಡಿಯಲಿ ಬಂದು
ಮಂದರೋದ್ಧರನ ಸೇವೆಯನು ಎಲ್ಲರೂ
ಚಂದದಲಿ ಮಾಡುತ್ತಲಿಹರು || ೧೦

ದಾಸಯ್ಯ ತಡವೇಕೆ ಹಾಕಿಹುದು ನಡೆಯೊಡೆಯ
ಮೀಸಲಿನ ಬಿಸಿ ಅಡುಗೆ ಆರುತಿಹುದೊ
ದಾಸಯ್ಯ ನೀ ಊಟಮಾಡೊ ೧೧

ದಾಸಯ್ಯ ಜೋಗಯ್ಯ ವೇಶಧಾರಿಗಳೆಲ್ಲ
ಭೇಷಾಗಿ ಊಟವನು ಮಾಡುತ್ತ ಅವರು
ಲೇಸಾಗಿ ಸೇರಿದರು ಮನೆಯ || ೧೨

ಬಂದಿದ್ದ ಜನರೆಲ್ಲ ತಿಂದು ತೇಗಿದರಲ್ಲಿ
ನೊಂದು ಹಸಿದಿಹ ತಿಮ್ಮ ಕೂಳ ಕೇಳೆ
ಬಂದು ನೂಕಿದರವನ ಜನರು || ೧೩

ನೂಕೆ ಬಿದ್ದನು ತಿಮ್ಮ ನಾಕು ಮೊಳದೂರದಲಿ
ಈ ಕುರುಡ ಜನುಮವನು ನೀಗಲಾರೆ
ಸಾಕುಮಾಡೈ ತಂದೆ ಎನುತ || ೧೪

ಬಿದ್ದು ಗೊಳಾಡುತಿರೆ ಸದ್ದಿಲ್ಲ ತೋಪಿನಲಿ
ಎದ್ದು ನಿಲಲಾರ ಸಂಕಟದಿ ಕುರುಡವನ
ವದ್ದಾಡುತಿಹನಲ್ಲಿ ಪಾಪ || ೧೫

ಜಾತಿನೆಪದಲಿ ಕೆಲರು ನೀತಿಯನು ಮರೆತಿಹರು
ಭೂತ ದಯೆಯಿಲ್ಲಿ ಅವರಿಗೆ, ಸ್ವಾರ್ಥದ
ಭೂತ ಹಿಡಿದಿಹುದು ನೋಡೆ || ೧೬

ಏನು ಓದಿದರೇನು ಏನುಮಾಡಿದರೇನು
ನಾನು ನೀನೆಂಬ ಭೇದವಳಿಯದೆ ನರನು
ಜ್ಞಾನಿಯಾಗನು ನೋಡೆ ಜಗದಿ || ೧೭

ಜಾವಕಳೆಯಿತು ಹೀಗೆ ನೋವು ಹೆಚ್ಚಿತು,
ಜೀವದಾಸೆಯ ಬಿಟ್ಟು ಮೊರೆಯಿಟ್ಟನವ
ದೇವದೇವನೆ ಸಲಹು ಎನುತ || ೧೮

ವಾಸುದೇವನೆ ಸಲಹೊ ನಾಶರಹಿತನೆ ಸಲಹೊ
ಶೇಷಗಿರಿವಾಸ ಸಲಹೆನ್ನ ತಂದೆ
ಘಾಸಿಪಡಲಾರೆ ಪೊರೆಯೊ ಹರಿಯೆ || ೧೯

ಏಕೆ ನೀನನಗಿತ್ತೆ ಈ ಕುರುಡ ಜನುಮವನು
ಸಾಕುಮಾಡೆಲೊ ತಂದೆ ಕೃಪೆಯ ತೋರಿ
ಲೋಕ ಪೊಗಳಲಿ ನಿನ್ನ ದಯೆಯ || ೨೦

ಏತಕ್ಕೆ ಕೃಪೆಮಾಡೆ ಜಾತಿಬಾಹಿರನೆಂದೆ
ಜಾತಿ, ದೇಹ, ಭೇದ ಇವು ತಡೆಯೇ ನಿನಗೆ
ಸೋತಿಹೆನು ಕರುಣಾಳು ಪೊರೆಯೊ ॥ ೨೧

ಜಾರುತಿದೆ ದೇಹವಿದೊ ಸೇರಿಸಿಕೊ ಪಾದದಲಿ
ಮಾರಪಿತ ನೀನೆಂದು ಮಲಗಿರಲು,
ತೋರ ಮಿಂಚೊಂದು ಹೊಳೆಯಿತಾಗ॥ ೨೨

ಮುಚ್ಚಿದ್ದ ಕಂಗಳವೆ ಬಿಚ್ಚಿ ಬೆಳಗಿತು, ತಿಮ್ಮ
ಎಚ್ಚೆತ್ತು ಸಂಭ್ರಮದಿ ಸುತ್ತ ನೋಡುತಲಿರಲು
ಅಚ್ಯುತನ ಆಲಯದೊಳಿಹನು ॥ ೨೩

ಏಳುಗಾವುದದಾಚೆ ಮೇಲೆ ತಿರುಪತಿ ಇಹುದು
ಸಾಲುಗೋಪುರ ಕಳಶ ಗುಡಿಗೆ ಇಹುದು
ಬಾಲಾಜಿ ನೆಲಸಿರುವನಲ್ಲಿ॥ ೨೪

ನಿಂತಿಹನು ತಿಮ್ಮನದೊ ಕಂತುಪಿತನೆದುರಿನಲಿ
ಸಂತಸಕೆ ಕಣ್ಣೀರು ಬರೆ ಕಂಡನವ
ಅಂತರಂಗದಲಿದ್ದ ಹರಿಯ ॥ ೨೫

ಉಟ್ಟ ಪೀತಾಂಬರವು ತೊಟ್ಟರನ್ನದ ಒಡವೆ
ಇಟ್ಟಿರುವ ನಾಮ, ರನ್ನ ಮುಡಿ, ಕುಂಡಲವು
ದಟ್ಟವಾಗಿಹ ತುಳಸಿಹಾರ ॥ ೨೬

ಶಂಖ ಚಕ್ರವು ಕರದಿ, ಅಂಕದಲಿ ಸಿರಿದೇವಿ
ಸಂಕಟವ ಪರಿಹರಿಪ, ಅಭಯಹಸ್ತ
ವೆಂಕಟೇಶಗೆ ಒಪ್ಪುತಿಹುದು॥ ೨೭

ಬಂಗಾರ ಗಿರಿವಾಸ ಶೃಂಗಾರ ಮೂರುತಿಯು
ಮಂಗಳಾಕಾರದ ಮೋಹದರಗಿಣಿಯುವ
ಅಂಗಜನ ಪೆತ್ತಯ್ಯನಹುದು ॥ ೨೮

ತಾಳೆ, ತಮ್ಮಟೆ, ಭೇರಿ ತಾಳಮೊದ್ದಲೆ ಶಂಖ
ಮೇಲೆನಿಪ ಓಲಗದ ರವದ ಇಂಪು
ಕೇಳುತಿದೆ ಹರಿನಾಮ ಭಜನೆ॥ ೨೯

ನಿನ್ನ ದರುಶನಕಾಗಿ ಮುನ್ನುಗ್ಗಿ ಬರುತಿಹರು
ಹಣ್ಣು ಸಕ್ಕರೆಯ ತಂದು ಕೊಡುತಿಹರು
ನಿನ್ನ ಮಹಿಮೆ ಪಿರಿದಯ್ಯ ನೋಡೆ ॥ ೩೦

ವಪ್ಪದಲಿ ಕಟ್ಟಿಟ್ಟ ತಪ್ಪುಕಾಣಿಕೆ ಹೊನ್ನ
ತಪ್ಪದೇ ತಂದು ಕಣಜಕ್ಕೆ ಒಪ್ಪಿಸುತ
ತಪ್ಪುಮನ್ನಿಸು ಎನ್ನುತಿಹರು ॥ ೩೧

ಕಷ್ಟವನು ಪರಿಹರಿಸು ಇಷ್ಟವನು ನೀ ಸಲಿಸು
ಪುಟ್ಟ ಮಗುವಿತ್ತು ಮನೆಬೆಳಕ ನಡೆಸು
ಸೃಷ್ಟಿಗೊಡೆಯನೆ ಎನ್ನುತಿಹರು॥ ೩೨

ಶ್ರೀನಿವಾಸನೆ ನೀನು ಏನು ಕರುಣಿಯೊ ತಂದೆ
ದೀನರಿಷ್ಟ ಸಲಿಪೆ ಭಕ್ತಂಗೆ, ಸುರ
ಧೇನು ಕಲಿಯುಗದಿ ಸತ್ಯನೀನು ॥ ೩೩

ಆದರದಿ ಅರ್ಚಕರು ಪಾದ ತೀರ್ಥವನಿತ್ತು
ಪಾದದಾ ತೊಳಸಿ ಶಾಲ್ಯಾನ್ನವವನಿಗೆ
ವೇದಮಂತ್ರದಿ ಹರಸಿಕೊಡಲು ॥ ೩೪

ತಿಮ್ಮ ಪೊಂಪುಳಿ ಪೋಗಿ ದಮ್ಮುಹಿಡಿದರುಹಿದನು
ಪ್ರೇಮದೊಳಿತ್ತೆ ಕಣ್ಣ ದರುಶನವ
ದಮ್ಮಯ್ಯ ನಿನ್ನ ಬಿಟ್ಟು ಪೋಗೆ ॥ ೩೫

ಕೇಳಿ ಮೆಚ್ಚುತ ಹರಿಯು ಪೇಳಿದನು ಸನ್ನೆಯಲಿ
ತಾಳು ಶಾಂತಿಯ ತಿಮ್ಮ, ಕೊಡುವೆ ಸುಖವ
ಕೇಳು ನೀ ನಿನ್ನ ಜನುಮ ಕಥೆಯ ॥ ೩೬

ಜಾತಿ, ಧನ, ಬಲ, ಮದದಿ ಘಾತಿಸಿದೆ ಬಡವರನು
ಸೋತಿರುವ ಅಂಗ ಹೀನರನು ಜರಿದೆ
ಪ್ರೀತಿಸದೆ ಹೋದೆ ತಿಮ್ಮ ನೀನು ॥ ೩೭

ನಿನ್ನ ನುಡಿ ನಿಜವಹುದು, ನಿನ್ನ ಕಥೆ ಮೇಲಹುದು
ನಿನ್ನ ನೆನವರಘ ಪೋಪುದೆಲೊ ತಿಮ್ಮ
ಎನ್ನುತಾ ಹರಿ ಮಾಯವಾದ ॥ ೩೮

ಬೆಚ್ಚಿಬಿದ್ದನು ತಿಮ್ಮನು ಅಚ್ಯುತನ ಕಾಣದಲೆ
ಎಚ್ಚತ್ತು ಹರಿಯನವ ಕಂಡು ಹೃದಯದಿ
ಸಚ್ಚರಿತ ಹರಿಪುರಕೆ ನಡೆದ ॥ ೩೯

ಬಂದ ತಿಮ್ಮನ ಕಂಡು ವಂದಿಸುತ ಊರುಜನ
ಮಂದಿರಕೆ ಕರೆತಂದು, ಹರಿಭಕ್ತನಿವನೆಂದು
ಉಪಚರಿಸಿ ಪೊಗಳುತಿರಲು ॥ ೪೦

ಶ್ರೀವರನ ಭಜಿಸುತ್ತಾ ಪಾವನನು ತಾನೆನಿಸಿ
ಐವತ್ತು ವರುಷಗಳ ಕಳೆದು, ತಿಮ್ಮ
ದೇವ ದೇವನ ಪಾದಸೇರ್ದ ॥ ೪೧

ಅತ್ತ ಕಾಣುತಲಿರುವ ಎತ್ತರದ ತೋಪಿನಲಿ
ಹುತ್ತವಿದೆ, ಅದು ತಿಮ್ಮನಾ ಗದ್ದುಗೆಯು
ನಿತ್ತದಲಿ ಅದಕೆ ಪೂಜೆಯುಂಟು ॥ ೪೨

ಶ್ರೀನಿವಾಸನೆ ಜಯತು, ದೀನರಕ್ಷಕ ಜಯತು
ಮಾನನಿಧಿ ಪರಮಕರುಣಾಳು ಜಯತು
ಜ್ಞಾನನಿಧಿ ನಾರಸಿಂಹ ಜಯತು ॥

---

**ಡಾ॥ ಕೆ. ಚಂದ್ರಶೇಖರ್**

---

# ಆಳ್ವಾರರು ಹಾಗೂ ಜಗತ್ತು

ತಮಿಳುನಾಡಿನ ವಿಷ್ಣುಭಕ್ತರಾದ ಆಳ್ವಾರರು ಪರಮಾತ್ಮನ ದರ್ಶನ, ಪೂಜನ, ಪ್ರಾರ್ಥನೆಯಲ್ಲಿ ತಮ್ಮ ಇಡೀ ಜೀವಮಾನವನ್ನು ಕಳೆದರೂ, ತಮ್ಮ ಸುತ್ತಮುತ್ತಲಿನ ಮಾನವರ ಯೋಗಕ್ಷೇಮವನ್ನು ಮರೆತಿರಲಿಲ್ಲ. ತಮ್ಮ ಹಾಗೆ ಇಡೀ ಸಮಾಜ ಪರಮಾತ್ಮ ಸಾಕ್ಷಾತ್ಕಾರ ಪಡೆದು ಉಜ್ಜೀವಿಸಲಿ ಎಂಬ ಉದ್ದೇಶದಿಂದ, ತಮ್ಮ ಧಾರ್ಮಿಕ ಅನುಭವವನ್ನು ಬಹು ಸೊಗಸಾದ ಪದ್ಯಗಳಲ್ಲಿ ವಿವರಿಸಿದ್ದಾರೆ. ಇವೇ ದಿವ್ಯ ಪ್ರಬಂಧಗಳು. ವಕೀಲರು ತಮ್ಮ ಕಕ್ಷಿಗಳ ಪರ ವಾದಮಾಡುವಂತೆ, ಆಳ್ವಾರರು ಪರಮಾತ್ಮನ ಮುಂದೆ ಇಡೀ ಜಗತ್ತು ಸ್ವಾಮಿಯ ಕರುಣೆಗೆ ಪಾತ್ರವಾಗಲು ಯೋಗ್ಯವಾಗಿದೆ, ಮಾನವರ ಪ್ರಾರ್ಥನೆಯನ್ನು ಅಂಗೀಕರಿಸಿ ಅವರ ಪಾಪ ಪರಿಹಾರ ಮಾಡಿ, ಮೋಕ್ಷಾನಂದವನ್ನು ಅನುಗ್ರಹಿಸಿ, ಚೇತನೋದ್ಧಾರ ಮಾಡಬೇಕೆಂದು ಪ್ರಾರ್ಥಿಸಿದ್ದಾರೆ.

"ಹೇ! ವೈಕುಂಠಪತಿಯೇ! ನಿನ್ನ ಸೃಷ್ಟಿಯು, ಪಕ್ಷಿ, ಮೃಗ, ಮಾನವರೆಂದು ವಿವಿಧರೀತಿಯಲ್ಲಿ ಅನೂಚಾನವಾಗಿ ನಡೆದು ಬರುತ್ತಿದೆ. ಅವರೆಲ್ಲರನ್ನೂ ನೀನು ರಕ್ಷಿಸಬೇಕು. ಈ ಜಗತ್ತಿನಲ್ಲಿ ಅಜ್ಞಾನ, ದುಷ್ಕೃತ್ಯ ಕೆಟ್ಟಜೀವನ– ಇತ್ಯಾದಿಗಳು ಮಾನವರನ್ನು ಕಷ್ಟ–ಸಂಕಟಗಳಿಂದ ನರಳುತ್ತಿರುವಂತೆ ಮಾಡುತ್ತಿವೆ. ಹೇ ಪ್ರಭೂ! ನೀನು, ಮಾನವರ ಪ್ರಾರ್ಥನೆಯನ್ನು ಅಂಗೀಕರಿಸಿ, ಅವರ ಕಷ್ಟಸಂಕಟಗಳನ್ನು ಪರಿಹರಿಸು" ಎಂದು ಆಳ್ವಾರರು ಪರಮಾತ್ಮನನ್ನು ಬೇಡಿದ್ದಾರೆ.

ಆಳ್ವಾರರು ತಮ್ಮ ಮನಸ್ಸನ್ನು ಕುರಿತು ಪರಮಾತ್ಮನ ವಿಷಯವಾಗಿ ಪ್ರಾರ್ಥಿಸುವಂತೆ ಕೇಳಿಕೊಂಡಿದ್ದಾರೆ. ಸ್ವಾಮಿಯ ದಿವ್ಯ ಚೇಷ್ಟಿತಗಳನ್ನು ಧ್ಯಾನಿಸುವಂತೆ ಸೂಚಿಸಿದ್ದಾರೆ. ಸ್ವಾಮಿಯ ಮಹಿಮೆಯನ್ನೂ, ಭಕ್ತಿಯುತವಾಗಿ ಪ್ರಾರ್ಥಿಸುವಂತೆ ಹೇಳಿಕೊಂಡಿದ್ದಾರೆ. ಅವುಗಳೆಲ್ಲ ಅನುಕರಣ ಯೋಗ್ಯವಾಗಿವೆ. ಇಂತಹ ದಿವ್ಯಪ್ರಬಂಧಗಳನ್ನು ಅವರು ಹಾಡಿ ಪ್ರಚಾರಮಾಡಿ, ಇತರರೂ ತಮ್ಮ ಹಾಗೆ ಅವುಗಳನ್ನು ಹಾಡಿ ಉಜ್ಜೀವಿಸಲೆಂದು ಉಪಕರಿಸಿದ್ದಾರೆ.

"ಹೇ! ಮನಸ್ಸೇ! ಸುಂದರವಾದ ಮತ್ತು ತುಳಸೀಮಾಲಾಧಾರಿಯಾದ ಪರ–ಮಾತ್ಮನನ್ನು ಭಕ್ತಿಯಿಂದ ಭಜಿಸು, ಸ್ವಾಮಿಯ ಕರುಣೆಯಿಂದಲೇ, ಜಲವೂ, ಪರ್ವತವೂ, ವಿಶಾಲ ಆಕಾಶವೂ, ವಾಯುವೂ. ದೇಹ ಮತ್ತು ಆತ್ಮ– ಎಲ್ಲವೂ ನಿಂತಿದೆ ಎಂಬುದನ್ನು ಮರೆಯಬೇಡ," ಮಾನವರು ವಿಹಿತ ಕರ್ಮದಿಂದಲಾಗಲಿ, ಭಕ್ತಿಯಿಂದಲಾಗಲಿ, ಪರಮಾತ್ಮನನ್ನು ಧ್ಯಾನಿಸಬೇಕೆಂದು ಇದರಿಂದ ಆಯಿತು.

"ಹೇ, ಮನಸ್ಸೇ! ಪರಮಾತ್ಮನು ಎಲ್ಲೆಲ್ಲಿಯೂ ಇರುವನು ಎಂದು ತಿಳಿ. ಆಕಾಶವನ್ನು ಎದುರಿಸುವ ಉನ್ನತ ಪರ್ವತ ಶಿಖರಗಳಿಂದ ಕೂಡಿ, ಅನೇಕ ಝರಿಗಳಿಂದ ಅಲಂಕೃತವಾಗಿರುವ ವೆಂಕಟಾದ್ರಿಯಲ್ಲಿ ಇರುವನೆಂದು ತಿಳಿ. ದುಷ್ಟ ಘಟಸರ್ಪದ ಹೆಡೆಯ ಮೇಲೆ ನರ್ತನ ಮಾಡಿ ಎಲ್ಲರನ್ನೂ ಸಂತೋಷಪಡಿಸಿ ರಕ್ಷಿಸಿದ ಶ್ರೀಕೃಷ್ಣ ಪರಮಾತ್ಮನ ಚರಣಾರವಿಂದಗಳಲ್ಲಿ, ಭಕ್ತಿಯಿಂದ ನಮಸ್ಕರಿಸುವುದೇ ಮುಖ್ಯ ಪ್ರಯೋಜನ ಎಂದು ತಿಳಿ" ಎಂದು ಹಾಡಿದ್ದಾರೆ ಆಳ್ವಾರರು.

"ಹೇ, ಪ್ರಭೋ! ಇಂದಾಗಲಿ, ನಾಳೆ ಆಗಲಿ, ಮುಂದೆ ಬರತಕ್ಕ ಕಾಲದಲ್ಲಿ ಆಗಲಿ, ನಿನ್ನ ದಿವ್ಯ ಕೃಪೆಯು ನನ್ನ ಮೇಲೆ ಇದೆ. ನೀನು ನನ್ನನ್ನು ಬಿಟ್ಟು ಇರುವುದಿಲ್ಲ, ನಾನು ನಿನ್ನನ್ನು ಬಿಟ್ಟು ಇರುವುದಿಲ್ಲ. ಹೇಗೆಂದರೆ ನರನಿಲ್ಲದ ನಾರಾಯಣ ನಾಮ ಇರುವುದಿಲ್ಲ. ಸರ್ವಾಧಾರನಾದ ನಾರಾಯಣನಿಲ್ಲದೆ ನರ ಜೀವಿಸುವುದಕ್ಕಾಗುವುದಿಲ್ಲ".

ಪರಮಾತ್ಮನು ಸರ್ವಶಕ್ತನು. ದುಷ್ಟನಾದ ಬಕಾಸುರನ ಕೊಕ್ಕನ್ನು ಸೀಳಿ, ಕೊಂದು ಶಿಷ್ಟರನ್ನು ರಕ್ಷಿಸಿದನು. ವೇದ ಪ್ರತಿಪಾದ್ಯನಾದ ಗರುಡನನ್ನು ವಾಹನ–ವಾಗುಳ್ಳವನು. ಪ್ರಕಾಶಮಾನವಾದ ಚಕ್ರವನ್ನು ಧರಿಸಿರುವವನು. ಕ್ಷೀರ ಸಮುದ್ರದಲ್ಲಿ ಶೇಷನಮೇಲೆ ಕುಳಿತು ಅವನಿಗೂ ಅವನ ಪ್ರೀತಿಯಾದ ಗರುಡನಿಗೂ, ಸ್ನೇಹವಿರುವಂತೆ ಮಾಡಿರುವವನು. "ಹೇ! ಮನಸ್ಸೇ! ಅಂತಹ ಪರಮಾತ್ಮನನ್ನು ನಿತ್ಯವೂ ತಪ್ಪದೆ ಪ್ರಾರ್ಥಿಸು". ಎಂದು ತಿರುಮಳಿಶೈಯಾಳ್ವಾರರು ಹಾಡಿದ್ದಾರೆ.

ವೆಂಕಟೇಶ್ವರನು ವಿಷ್ಣುವಿನ ಅವತಾರ. ಅವನು ಮಾನವರ ಪಾಪಪರಿಹಾರ ಮಾಡುವವನು. ಬ್ರಹ್ಮರುದ್ರರು ವೆಂಕಟಾಚಲ ಪರ್ವತಕ್ಕೆ ಸ್ವಾಮಿಯ ದರ್ಶನಕ್ಕೆ

**ಶ್ರೀ ಡಿ. ಕೃಷ್ಣೈಂಗಾರ್**



ಬರುವರು. ಮಾರ್ಕಂಡೇಯ ಮಹರ್ಷಿಯು ವೆಂಕಟಾಚಲಪತಿಯನ್ನು ಆರಾಧಿಸಿ,ಅದ್ಭುತ ರೀತಿಯಲ್ಲಿ ವರ್ಣಿಸಿದ್ದಾನೆ. "ಈ ಪರ್ವತದಲ್ಲಿ, ಆನೆ, ಸಿಂಹ, ಯಾಳಿ, ಚಿನ್ನ, ರತ್ನ ಮತ್ತು ಪುಷ್ಪದಿಂದ ಕೂಡಿದ ತರುಲತೆಗಳೂ ಹೇರಳವಾಗಿವೆ. ಅಷ್ಟೈಶ್ವರ್ಯ ಭಂಡಾರದಿಂದ ಕೂಡಿದ ಈ ಪರ್ವತದಲ್ಲಿ ಸ್ವಾಮಿಯು ನೆಲೆಸಿರುವನು. ಇಂತಹ ಸ್ವಾಮಿಯ ದರ್ಶನ ತನಗೆ ಲಭ್ಯವಾದುದು ತನ್ನ ಭಾಗ್ಯ" ಎಂದು ತಿರುಮಳಿಶೈ ಆಳ್ವಾರರು ಕೊಂಡಾಡಿದ್ದಾರೆ.

ಆಳ್ವಾರರ ಪರಂಪರೆಗೆ ಕಿರೀಟ ಪ್ರಾಯರಾದ ನಮ್ಮಾಳ್ವಾರರು, ಜಗತ್ತಿನ ಕಷ್ಟಸಂಕಟಗಳನ್ನು ಕಂಡು ಮರುಗಿ 'ಮಾನವರು ಪರಮಾತ್ಮನ ಕಡೆಗೆ ಹೋಗುವ ಪ್ರಯತ್ನ ಮಾಡುತ್ತಿಲ್ಲವಲ್ಲಾ' ಎಂದು ದುಃಖಿಸಿದ್ದಾರೆ. ತಮ್ಮ ಮನಸ್ಸನ್ನು ಕುರಿತು ಹಾಗೆ ಹೇಳಿಕೊಂಡಿದ್ದಾರೆ.

'ಪರಮಾತ್ಮನು ಜಗತ್ತನ್ನು ಸೃಷ್ಟಿಸಿ, ವರಾಹ ಅವತಾರದಲ್ಲಿ ಅದನ್ನು ಧರಿಸಿ, ಪ್ರಳಯ ಕಾಲದಲ್ಲಿ ಅದನ್ನು ತನ್ನ ಉದರದಲ್ಲಿ ನಿಲ್ಲಿಸಿ, ಸೃಷ್ಟಿಕಾಲದಲ್ಲಿ ಅದನ್ನು ಹೊರಪಡಿಸಿದ್ದಾನೆ. ಬಲಿಚಕ್ರವರ್ತಿಯಿಂದ ಸ್ವಾಧೀನಪಡಿಸಿಕೊಂಡು ರಕ್ಷಿಸಿದ್ದಾನೆ. ಹೀಗೆ ಸರ್ವಕಾಲದಲ್ಲಿ ಜಗತ್ತನ್ನು ರಕ್ಷಿಸಿರುವ ಸರ್ವಕಾರಣನೂ, ಪರಾತ್ಪರನೂ ಆದ ಶ್ರೀಮನ್ನಾರಾಯಣನನ್ನು ಜಗತ್ತು ಆಶ್ರಯಿಸಿ ಉಜ್ಜೀವಿಸುತ್ತಿಲ್ಲವಲ್ಲಾ' ಎಂದು ಆಳ್ವಾರರು ಯೋಚಿಸಿದ್ದಾರೆ.

ನಮ್ಮಾಳ್ವಾರರು ಪರಮಾತ್ಮನನ್ನು ಪಡೆಯುವ ವಿಧಾನವನ್ನು ತಮ್ಮ ದಿವ್ಯ ಪ್ರಬಂಧದಲ್ಲಿ ವಿವರಿಸಿದ್ದಾರೆ. ಎಲ್ಲರೂ ಅಂತಹ ಪ್ರಯತ್ನ ಕೈಕೊಳ್ಳಬಹುದೆಂದು ತಮ್ಮ ಮನಸನ್ನು ಕುರಿತು ಹೇಳಿದ್ದಾರೆ. "ಹೇ ಮನಸ್ಸೇ! ಅಪ್ರಮೇಯ ಸ್ವರೂಪನೂ, ನಿರತಿಶಯನೂ, ಆಗಿರುವ ಪರಮಾತ್ಮನು ಅಜ್ಞಾನವನ್ನು ಧ್ವಂ ಮಾಡಿ, ತನ್ನ ತೇಜೋಪ್ರಭಾವದಿಂ ಜಗತ್ತಿಗೆ ಜ್ಞಾನಶಕ್ತ್ಯಾದಿಗಳನ್ನು ಕರು ಸಿರುವನು. ನಾಯಕನಾಗಿ ಪರಂಜ್ಯೋ ಎನಿಸಿರುವ, ಶ್ರಿಯಃಪತಿಯನ್ನು ಪಾದಾ ವಿಂದಗಳನ್ನು ಭಜಿಸಿ ಉಜ್ಜೀವಿಸು ಎಂದಿದ್ದಾರೆ.

"ಹೇ, ಆಶ್ಚರ್ಯಭರಿತನಾದ ನನ ಸ್ವಾಮಿಯೇ! ನಾನು ನಿನ್ನಿಂದ ಪಡೆ ಉಪಕಾರಗಳನ್ನು ಹೇಳಲು ಪ್ರಾರಂಭಿಸಿದ ಅದಕ್ಕೆ ಕೊನೆ ಮೊದಲೇ ಇರುವುದಿಲ್ಲ. ಹೇ ತಾಯಿಯಂತೆ ಪ್ರೀತಿಸುವವನು ನೀನ ಹುಟ್ಟಿಸಿದ ತಂದೆಯಂತೆ ಹಿತವನ್ನುಂಟ ಮಾಡುವವನು ನೀನು. ಜ್ಞಾನಕೊಟ ಉಪದೇಶಮಾಡಿದ ಆಚಾರ್ಯನು ನೀನ ಮಹಾ ವಂಚಕಳಾದ ಪೂತನಿಯನ ಸಂಹಾರಮಾಡಿದ ಶ್ರೀಕೃಷ್ಣಪರಮಾತ್ಮ

(ಮುಂದಿನ ಪುಟ ನೋ

---

(30 ನೇ ಪುಟದಿಂದ)

ವಸಿಷ್ಠರು ಸೂರ್ಯನಿಗೆ ಆಶೀರ್ವಚನ ನೀಡಿ, ತಪತಿಯನ್ನು ಕರೆದುಕೊಂಡು, ಗಗನ ಮಾರ್ಗದ ಮುಖಾಂತರ ಸಂವರಣನ ಬಳಿಗೆ ಬಂದರು.

ಅಲ್ಲಿಯೇ ಅಗ್ನಿಯನ್ನು ಪ್ರಜ್ವಲಗೊಳಿಸಿದರು. ದೇವದೇವತೆಗಳನ್ನು ಮಂತ್ರ ಪುರಸ್ಸರವಾಗಿ ಆಹ್ವಾನಿಸಿ, ಆ ಅರಣ್ಯ ದೇವತೆಯ ಎದುರಿನಲ್ಲಿ ವಿಧಿಪೂರ್ವಕವಾಗಿ ಸಂವರಣ–ತಪತಿಯರ ವಿವಾಹವನ್ನು ವಸಿಷ್ಠರು ನೆರವೇರಿಸಿದರು.

ರಾಜಧಾನಿ ಅಯೋಧ್ಯೆಗೆ ಮರಳಿ, ರಾಜಧರ್ಮಕ್ಕೆ ಅನುಗುಣವಾಗಿ ಸಂವರಣನು ತನ್ನ ಕರ್ತವ್ಯವನ್ನು ನಿರ್ವಹಿಸಿ, ಪ್ರಜಾಪಾಲನೆ ಮಾಡತೊಡಗಿದ. ತಪತಿಯು ಅವನ ಎಲ್ಲ ರೀತಿಯ ಕಾರ್ಯಗಳಲ್ಲೂ ಸಹಕರಿಸುತ್ತಿದ್ದಳು.

ಮುಂದೆ ಅವಳು 'ಕುರು' ಮಹಾರಾಜನಿಗೆ ಜನ್ಮವಿತ್ತಳು. ಇದೇ ಕುರು ಚಕ್ರವರ್ತಿಯು ಯಾಗಶಾಲೆಗಾಗಿ ಒಂದು ಪುಣ್ಯತಮ ಪ್ರದೇಶವನ್ನು ನಿರ್ಮಿಸಿದ. ಇದೇ ಕುರುಕ್ಷೇತ್ರ. ದುಃಖಕರವಾದ ವಿಚಾರವೆಂದರೆ ಭಗವದ್ಗೀತೆಯು ಸೃಷ್ಟಿಯಾದ ಈ ಪುಣ್ಯಭೂಮಿಯಲ್ಲೆ ಮಹಾಭಾರತ ಯುದ್ಧವಾಗಿ ಲಕ್ಷಾಂತರ ಜನರು ಹತರಾದರು. ಕುರುವಿನ ಪ್ರತಿಯೊಂದು ಯೋಜಿತ ಪುಣ್ಯಕಾರ್ಯದಲ್ಲೂ ತಪತಿಯ ಕೈವಾಡವಿದ್ದಿತು. ಆಕೆಯ ಮಾರ್ಗದರ್ಶನದಲ್ಲೆ ಕುರು ಅತ್ಯುಚ್ಚ ಮಟ್ಟಕ್ಕೇರಲು ಸಾಧ್ಯವಾಯಿತು; ಪ್ರಪಂಚದ ಮೊದಲನೆ ಚಕ್ರಾಧಿಪತ್ಯವನ್ನು ಸ್ಥಾಪಿಸಲು ಸಹಕಾರಿಯಾಯಿತು.

(ವಿವಿಧ ಮೂಲಗಳಿಂದ)



(11ನೇ ಪುಟದಿಂದ)

ಪಾರಮಾರ್ಥಿಕವನ್ನು ಪಡೆದು ಧನ್ಯನಾ ಬೇಕೆಂದು ಹೇಳಿದ್ದಾರೆ.

ಹೀಗೆ ಪುರಂದರದಾಸರ ಹಾಡುಗ ತತ್ತ್ವಜ್ಞಾನದ ಸಿಧಿಯೇ ಆಗಿವೆ. ಭಾರ ಸಂಸ್ಕೃತಿಯ ಎಲ್ಲ ಉದಾತ್ತಗುಣಗಳನ ವೇದೋಪನಿಷತ್ತುಗಳ ಸಾರವನ್ನು ಅವ ರಚನೆಗಳಲ್ಲಿ ಕಾಣಬಹುದು. ಅಪಾರವಾ ಅನುಭವ, ಭಕ್ತಿ,ಜ್ಞಾನಗಳು ಕೂಡಿ ಮೂಡಿ ಬಂದ ಅವರ ವಿಚಾರದರ್ಶನ ಅಂದಿನ ಜ ಜೀವನವನ್ನು ಶುಭ್ರಗೊಳಿಸಿ ಭಕ್ತಿ ಭಾ ವನ್ನು ಬಿತ್ತಿ ಆ ಮೂಲಕ ಸರ್ವರಿಗ ಕೈವಲ್ಯಪಥವನ್ನು ಕಾಣಿಸಿತು. ಶತಮಾ ಗಳು ಕಳೆದರೂ ದಾಸರ ನುಡಿಗಳು ಬೆಳಕಿ ಕಿರಣಗಳಾಗಿ ಲೋಕದ ಬದುಕಿಗೆ ಮಾ ದರ್ಶನ ನೀಡಬಲ್ಲದ್ದಾಗಿವೆ. ಪುರಂದ ದಾಸರನ್ನು ಕುರಿತ ಒಂದು ಸ್ತುತಿ ಹೀಗಿ

"ಜ್ಞಾನ ಭಕ್ತಿ ವೈರಾಗ್ಯ ಸಂಪನ್ನಂ ಭ ಮಾರ್ಗ ಪ್ರವರ್ತಕಂ ಪುರಂದರ ಗುರ ವಂದೇ ದಾಸ ಶ್ರೇಷ್ಠಂ ದಯಾನಿಧಿಂ...

ಈ ಮಾತು ದಾಸವರೇಣ್ಯರಾದ ಪುರಂ ದಾಸರ ಸಾಧನೆ ಸಿದ್ಧಿಗಳಿಗೆ ಅ ವ್ಯಕ್ತಿತ್ವಕ್ಕೆ ಸಂದ ಗೌರವವಾಗಿದೆ.

(ಹಿಂದಿನ ಪುಟದಿಂದ)

ನೀನು ನನಗೆ ತೋರಿಸಿದ ದಾರಿಗಳು ಎಷ್ಟು ಆಶ್ಚರ್ಯಕರವಾದುವು. ಅಂತಹ ಉಪಾಯಗಳನ್ನು ಎಲ್ಲರಿಗೂ ಕರುಣಿಸಿ ರಕ್ಷಿಸು" ಎಂದು ಆಳ್ವಾರರು ಕೇಳಿಕೊಂಡಿದ್ದಾರೆ.

ಪರಮಾತ್ಮ ಸಮಾಗಮಕ್ಕಾಗಿ ಹಾತೊರೆಯುತ್ತಿರುವ ಆತ್ಮನಂತೆ ಪರಮಾತ್ಮನೂ ಕೂಡ ಜೀವಾತ್ಮನನ್ನು ತನ್ನ ಬಳಿಗೆ ಕರೆದುಕೊಳ್ಳಲು ಕಾತರನಾಗಿದ್ದಾನೆ ಎಂಬುದನ್ನು ನಮ್ಮಾಳ್ವಾರವರು ಸ್ಥಾಪಿಸಿದ್ದಾರೆ. ಇದು ಪರಮಾತ್ಮ ಸಾಕ್ಷಾತ್ಕಾರ ರಹಸ್ಯ.

"ಹೇ, ದೇವಾಧಿದೇವಾ! ತ್ರಿವಿಕ್ರಮನಾಗಿ, ಕಮಲನಯನನಾಗಿ, ಶುಭ್ರದಂತನಾಗಿ, ಶುಚಿಸ್ಮಿತನಾಗಿ, ಪ್ರಕಾಶಿಸುತ್ತಿರುವ ನನ್ನ ಸ್ವಾಮಿಯೇ! ನಿನ್ನ ಅನಂತಕಲ್ಯಾಣ ಗುಣಗಳನ್ನು ಹೇಳಿ, ಧ್ಯಾನ, ಗಾನಮಾಡಿ, ನಿನ್ನ ಚರಣಾರವಿಂದಗಳಲ್ಲಿ ನಮಸ್ಕರಿಸುವ ಮನಸ್ಸನ್ನು ನನಗೆ ಕರುಣಿಸು ನೀನು ಸರ್ವಶಕ್ತನಾದ ಜಗತ್ಪತಿಯು" ಹೀಗೆ ಆಳ್ವಾರರು ಬೇಡಿ, ಜಗತ್ತನ್ನು ಹಾಗೆ ಕರುಣಿಸುವಂತೆ ತಮ್ಮ ದಿವ್ಯಪ್ರಬಂಧಗಳಲ್ಲಿ ಬೇಡಿದ್ದಾರೆ.

ಆಳ್ವಾರರ ಪರಂಪರೆಯಲ್ಲಿ ತಿರುಮಂಗೈಯಾಳ್ವಾರರು ಕೊನೆಯವರು. ನಮ್ಮಾಳ್ವಾರವರು ನಾಲ್ಕು ವೇದಗಳನ್ನು ತಮ್ಮ ನಾಲ್ಕು ದಿವ್ಯಪ್ರಬಂಧಗಳಲ್ಲಿ ತಿಳಿಸಿದ್ದಾರೆ. ಆರು ವೇದಾಂಗಗಳನ್ನು ತಿರಮಂಗೈ-ಯಾಳ್ವಾರರು ತಮ್ಮ ಆರು ದಿವ್ಯಪ್ರಬಂಧಗಳಲ್ಲಿ ವಿವರಿಸಿದ್ದಾರೆ. ಇವರು ಆಶುಕವಿಗಳೆಂದು ಪ್ರಸಿದ್ಧರಾಗಿದ್ದಾರೆ. ಜಗತ್ತಿಗೆ ಇವರು ಮಾಡಿರುವ ಮಹೋಪಕಾರ ವಿಶೇಷ ರೀತಿಯದು. ಇವರು ಗುಡಿ ಗೋಪುರಗಳನ್ನು ಕಟ್ಟಿಸಿ. ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ, ಉತ್ಸವಾದಿಗಳನ್ನು ವ್ಯವಸ್ಥೆಪಡಿಸಿ, ಪರಮಾತ್ಮನ ಕೈಂಕರ್ಯ ಮಾಡಿ ಮಾರ್ಗದರ್ಶನ ಮಾಡಿದ್ದಾರೆ.

ಪರಮಾತ್ಮನ ಸ್ವರೂಪ ರೂಪಗುಣ ವಿಭವ ಐಶ್ವರ್ಯಗಳನ್ನು ಪ್ರತ್ಯಕ್ಷವಾಗಿ ಕಂಡ ತಿರುಮಂಗೈಯಾಳ್ವಾರವರು ತಾವು ರಚಿಸಿರುವ ಅಮೋಘವಾದ ದಿವ್ಯಪ್ರಬಂಧಗಳಲ್ಲಿ ತಮ್ಮ ಅನುಭವವನ್ನು ವಿವರಿಸಿದ್ದಾರೆ. ಅವುಗಳಲ್ಲಿ ಕೆಲವು ಪದ್ಯಗಳಂತೂ, ಅವರ ಹೃದಯಾಂತರಾಳದಿಂದ ಬಂದ ಪಶ್ಚಾತ್ತಾಪ ಬುದ್ಧಿಯ ನಿಟ್ಟುಸಿರೋ ಎನ್ನುವಂತಿವೆ. ಈ ಪದ್ಯಗಳು ಅನುಕರಣ ಯೋಗ್ಯವಾಗಿವೆ.

ತಿರುಮಂಗೈಯಾಳ್ವಾರರು ಪರಮಾತ್ಮ ಸಾಕ್ಷಾತ್ಕಾರ ಪಡೆದು, ಲಕ್ಷ್ಮೀನಾರಾಯಣ ದರ್ಶನವಾದಾಗ, ತಮ್ಮ ಭಾವನೆಗಳನ್ನೂ, ಅನುಭವವನ್ನೂ ವಿವಿಧ ರೀತಿಯಲ್ಲಿ ಹಾಡಿ ಸಂತೋಷಪಟ್ಟಿದ್ದಾರೆ. ಅವರು ಹಾಡಿರುವ ಪದ್ಯಗಳು ಭಕ್ತಿಪ್ರಬೋಧಕಗಳಾಗಿವೆ.

"ಹೇ! ದೇವಾ! ಹೇ! ಪ್ರಭೂ! ಬೆಸ್ತರ ಒಡೆಯನಾದ ಗುಹನನ್ನು ಕೀಳು ಕುಲದವನೆಂದು ಅಸಡ್ಡೆ ಮಾಡದೆ,ಅವನನ್ನು ನಿನ್ನ ಕೃಪಾಸಮುದ್ರಗಳಲ್ಲಿ ಮುಳುಗಿಸಿದೆ. ಕಪಿಕುಲದ ಹನುಮಂತನನ್ನು ಕಪಿ ಎಂದು ಅಲ್ಲಗಳೆಯದೆ, ನಿನ್ನ ಪ್ರಾಣ ಸಮನೆಂದು ಅಪ್ಪಿಕೊಂಡೆ. ನಿನ್ನ ಪ್ರೇಮವನ್ನು ಅವನಿಗಿತ್ತೆ. ತಾವರೆಯ ಕೊಳದಲ್ಲಿ ಮೊಸಳೆಬಾಯಿಗೆ ಸಿಕ್ಕಿ ಸಂಕಟಪಡುತ್ತಿದ್ದ ಗಜೇಂದ್ರನು ಪಶುವೆಂದು ನಿರಾಕರಿಸದೆ, ಅವನು ನೆನೆದಾಗ ಓಡಿಬಂದು ರಕ್ಷಿಸಿದ ಜಗದ ಒಡೆಯ ನೀನು".

"ಹೇ! ಪ್ರಭೂ ಕೋಲೂರಿ ಮುಂದೆ ನಡೆಯಲಾಗದಂತಹ ಮುಪ್ಪು ಸುಳಿಯುವ ಮುನ್ನ, ಕಾಲೂರಿ ನಿಂತಾಗ ತೂಗಾಡುವ ಗತಿ ನನಗೆ ಬರುವಮುನ್ನ, ಹೆತ್ತತಾಯಂತೆ ಬಂದ ರಕ್ಕಸಿಯ ಉಸಿರನ್ನು ಹಿಂಡಿದ ದೇವಾ! ಕಾಪಾಡು. ನಿನಗೆ ತಲೆಬಾಗುವೆನು ಸ್ವಾಮಿ".

ಹೀಗೆ ತಿರುಮಂಗೈ ಆಳ್ವಾರರು ಸಾವಿರಕ್ಕೂ ಹೆಚ್ಚು ಪದ್ಯಗಳಲ್ಲಿ, ಅಷ್ಟಾಕ್ಷರೀಮಂತ್ರದ ಮಹಿಮೆ, ಬದರಿ ಕಾಶ್ರಮ, ಅಹೋಬಿಲ, ತಿರುಪತಿ, ತಿರುವಳ್ಳೂರು, ತಿರುವಳ್ಳಿಕ್ಕೇಣಿ, ತಿರುಕ್ಕುರಂಗಡಿ, ತಿರುಕ್ಕೋವಲೂರು. ತಿರುವೆಳ್ಳರೈ, ತಿರುವಣ್ಣಗರಂ, ತಿರುಕ್ಕಣ್ಣಮಂಗೈ, 'ತಿರುನರೆಯೂರ್, ತಿರುಮಾಲಿರುಂ ಶೋಲೆ, ತಿರುನಗರಿ, ಕಾಂಚಿಪುರ, ಶ್ರೀರಂಗ, ಮುಂತಾದ ಪುಣ್ಯಕ್ಷೇತ್ರಗಳಲ್ಲಿ ದರ್ಶನಕೊಡುತ್ತಿರುವ ಪರಮಾತ್ಮನ ಅರ್ಚಾಮೂರ್ತಿಗಳ ಹಿರಿಮೆಯನ್ನೂ, ಉತ್ಸವಾದಿಗಳ ವೈಭವವನ್ನೂ ಬಹು ಸೊಗಸಾದ ಪದ್ಯಗಳಲ್ಲಿ ವಿವರಿಸಿದ್ದಾರೆ. ಪರಮಾತ್ಮನ ದಿವ್ಯಮಂಗಳ ವಿಗ್ರಹಗಳನ್ನು ದರ್ಶನಮಾಡಿ ಕೃತಾರ್ಥರಾಗಿದ್ದಾರೆ. ಜಗತ್ತಿನ ಸರ್ವಜನರೂ ಹಾಗೆ ನೋಡಿ ಉಜ್ಜೀವಿಸಲೆಂದು ಹಾರೈಸಿದ್ದಾರೆ.

ಶ್ರೀಮನ್ನಾರಾಯಣನ ದರ್ಶನವಾದ ತಕ್ಷಣ ತಿರುಮಂಗೈ ಆಳ್ವಾರರು, "ಕಂಡೇ಼ನ್, ನಾರಾಯಣ಼ನ್ ಕಂಡೇ಼ನ್" ಎಂದು ಆಶ್ಚರ್ಯಕರ ರೀತಿಯಲ್ಲಿ ಭಕ್ತಿಯುತವಾಗಿ ಹಾಡಿದ್ದಾರೆ. ಮುಂದೆ ನಾರಾಯಣ ಸ್ಮರಣೆಯ ಮೂಲಕ ಅವನ ಮಹಿಮೆಯನ್ನೂ, ವೈಭವವನ್ನೂ ಹಾಡಿದ್ದಾರೆ. 'ನಾರಾಯಣ ಸ್ಮರಣೆ ಎಂಬುದು ಸುಖವನ್ನು ಕೊಡುವುದು, ಅಖಂಡ ಭವಿಷ್ಯವನ್ನುಂಟುಮಾಡುವುದು, ದುಃಖವನ್ನು ನಾಶಮಾಡುವುದು, ಕೈಂಕರ್ಯ ಸಾಮ್ರಾಜ್ಯವನ್ನು ಅನುಗ್ರಹಿಸುವುದು, ಹೆತ್ತತಾಯಿಗಿಂತ ಹೆಚ್ಚಿನ ಹಿತವನ್ನುಂಟು ಮಾಡುವುದು. ಇವುಗಳನ್ನೆಲ್ಲಾ ನಾರಾಯಣ ಎಂಬ ದಿವ್ಯ ನಾಮದಿಂದ ಕಂಡುಕೊಂಡೆನು.

"ಹೇ! ನೀಲಮೇಘಸ್ವಾಮಿಯೇ! ಚತುರ್ಭುಜನಾಗಿ, ಚಂದ್ರಮಂಡಲದಂತೆ ನೀನು ಪ್ರಕಾಶಮಾನ ಮುಖವುಳ್ಳವನಾಗಿ ಬಿಜಯಮಾಡಿರುವಾಗ, ನಿತ್ಯ ಯುವತಿಯರಾದ ಶ್ರೀದೇವಿ, ಭೂದೇವಿಯವರು, ಪುಷ್ಪದಂತೆ ಕೋಮಲವಾದ ತಮ್ಮ ಹಸ್ತಗಳಿಂದ ನಿನ್ನ ಪಾದಸೇವೆ ಮಾಡುತ್ತಿರುವಾಗ, ನೀನು ಯೋಗನಿದ್ರೆಯಲ್ಲಿ ಮಗ್ನನಾಗಿರುವೆ.

"ಹೇ! ಸರ್ವೇಶ್ವರಾ! ನೀನು ಧರ್ಮ ಅರ್ಥ, ಕಾಮ, ಮೋಕ್ಷ ಎಂಬ ಪುರುಷಾರ್ಥಗಳನ್ನು ಕರುಣಿಸುವೆ. ಪರ, ವ್ಯೂಹ, ವಿಭವ ಎಂಬ ಮೂರು ರೂಪಗಳಾಗಿರುವೆ. ಸರ್ವವ್ಯಾಪಿಯಾದ ನೀನು, ಅರ್ಚಾಮೂರ್ತಿಯಾಗಿ ಬಿಜಯಮಾಡಿ, ಐಹಿಕ, ಆಮುಷ್ಮಿಕ ಫಲಗಳನ್ನು ಅನುಗ್ರಹಿಸುವೆ.

# ಇಪ್ಪತ್ತೆಂಟು ನಾಮಗಳು

ಅರ್ಜುನ ಉವಾಚ:-

ಕಿಂನು ನಾಮಸಹಸ್ರಾಣಿ ಜಪಂತೇ ಚ ಪುನಃ ಪುನಃ ।
ಯಾನಿ ನಾಮಾನಿ ದಿವ್ಯಾನಿ ತಾನಿ ಚಾಚಕ್ಷ್ವ ಕೇಶವ ॥

ಶ್ರೀ ಭಗವಾನುವಾಚ :-

ಮತ್ಸ್ಯಂ ಕೂರ್ಮಂ ವರಾಹಂ ಚ ವಾಮನಂ ಚ ಜನಾರ್ದನಂ।
ಗೋವಿಂದಂ ಪುಂಡರೀಕಾಕ್ಷಂ ಮಾಧವಂ ಮಧುಸೂದನಮ್ ॥
ಪದ್ಮನಾಭಂ ಸಹಸ್ರಾಕ್ಷಂ ವನಮಾಲಂ ಹಲಾಯುಧಂ ।
ಗೋವರ್ಧನಂ ಹೃಷೀಕೇಶಂ ವೈಕುಂಠಂ ಪುರುಷೋತ್ತಮಂ॥
ವಿಶ್ವರೂಪಂ ವಾಸುದೇವಂ ರಾಮಂ ನಾರಾಯಣಂ ಹರಿಂ ।
ದಾಮೋದರಂ ಶ್ರೀಧರಂ ಚ ವೇದಾಂಗಂ ಗರುಡಧ್ವಜಂ॥
ಅನಂತಂ ಕೃಷ್ಣಗೋಪಾಲಂ ಜಪತೋ ನಾಸ್ತಿ ಪಾತಕಂ ।
ಗವಾಂ ಕೋಟಿ ಪ್ರದಾನಸ್ಯ ಅಶ್ವಮೇಧ ಶತಸ್ಯ ಚ॥
ಕನ್ಯಾದಾನ ಸಹಸ್ರಾಣಾಂ ಫಲಂ ಪ್ರಾಪ್ನೋತಿ ಮಾನವಃ ।
ಅಮಾಯಾಂ ವಾ ಪೌರ್ಣಮಾಸ್ಯಾಂ ಏಕಾದಶ್ಯಾಂ ತಥೈವ ಚ॥
ಸಂಧ್ಯಾಕಾಲೇ ಸ್ಮರೇನ್ನಿತ್ಯಂ ಪ್ರಾತಃಕಾಲೇ ತಥೈವ ಚ ।
ಮಧ್ಯಾಹ್ನೇ ಚ ಜಪೇನ್ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ॥

ಇತಿ ಶ್ರೀ ಕೃಷ್ಣಾರ್ಜುನ ಸಂವಾದೇ ವಿಷ್ಣೋರಷ್ಟಾವಿಂಶತಿ
ನಾಮಸ್ತೋತ್ರಂ ಸಂಪೂರ್ಣಂ

ಅರ್ಜುನ ಕೇಳಿದನು :- ಓ ಕೇಶವಾ! ದಿವ್ಯವಾದ ಸಹಸ್ರನಾಮಗಳ ಸಮಾನವಾದ ಯಾವ ನಾಮಗಳನ್ನು ಜಪಿಸುವವರೋ ಆ ನಾಮಗಳನ್ನು ನನಗೆ ಹೇಳು.

ಶ್ರೀಕೃಷ್ಣ ಹೇಳಿದನು :- ಓ ಅರ್ಜುನಾ!, ಮತ್ಸ್ಯ, ಕೂರ್ಮ, ವರಾಹ, ವಾಮನ, ಜನಾರ್ದನ, ಗೋವಿಂದ, ಪುಂಡರೀಕಾಕ್ಷ, ಮಾಧವ, ಮಧುಸೂದನ, ಪದ್ಮನಾಭ, ಸಹಸ್ರಾಕ್ಷ, ವನಮಾಲ, ಹಲಾಯುಧ, ಗೋವರ್ಧನ, ಹೃಷೀಕೇಶ, ವೈಕುಂಠ, ಪುರುಷೋತ್ತಮ, ವಿಶ್ವರೂಪ, ವಾಸುದೇವ, ರಾಮ, ನಾರಾಯಣ, ಹರಿ, ದಾಮೋದರ, ಶ್ರೀಧರ, ವೇದಾಂಗ, ಗರುಡಧ್ವಜ, ಅನಂತ, ಗೋಪಾಲಕೃಷ್ಣ, ಎನ್ನುವ ಈ ಇಪ್ಪತ್ತೆಂಟು ನಾಮಗಳನ್ನು ಯಾವನು ಜಪಿಸುವನೋ ಅವನಿಗೆ ಪಾಪಗಳು ಅಂಟವು, ಮತ್ತು ಒಂದು ಕೋಟಿ ಗೋವುಗಳನ್ನು ದಾನಮಾಡಿದ ಫಲವನ್ನು, ಒಂದು ನೂರು ಅಶ್ವಮೇಧ ಯಾಗಗಳನ್ನು ಮಾಡಿದ ಫಲವನ್ನು, ಒಂದು ಸಾವಿರ ಕನ್ಯಾದಾನಗಳ ಫಲವನ್ನು ಅವನು ಹೊಂದುವನು. ಇವನ್ನು, ಅಮಾವಾಸ್ಯೆ, ಪೌರ್ಣಮಿ, ಏಕಾದಶಿ ದಿನಗಳಲ್ಲಿ, ಬೆಳಿಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲ ಸಮಯದಲ್ಲಿ ಜಪಿಸುವ ಮಾನವನು ಸಮಸ್ತ ಪಾಪಗಳಿಂದ ವಿಮುಕ್ತನಾಗುವನು.

**—ಶ್ರೀ ಎ. ಎಸ್. ನಾರಾಯಣಮೂರ್ತಿ.**

"ಹೇ! ವಿಶ್ವಾತೀತನಾದ ಪರಮಾತ್ಮಾ! ನೀನು ಪುಣ್ಯಕ್ಷೇತ್ರಗಳಲ್ಲಿ ದಿವ್ಯಮಂಗಳ ವಿಗ್ರಹ ಯುಕ್ತವಾದ ಅರ್ಚಾಮೂರ್ತಿಯಾಗಿ ಬಿಜಯಮಾಡಿಸಿ,ಭಕ್ತರ ಆರಾಧ್ಯನಾಗಿ ಕೈಂಕರ್ಯಗಳನ್ನು ಸ್ವೀಕರಿಸಿ, ಯೋಗನಿದ್ರೆಯಲ್ಲಿರುವಾಗ, ಜಗತ್ತಿನ ಜನರ ಕಷ್ಟಸಂಕಟಗಳನ್ನು ಕೃಪೆಯಿಂದ ದೂರಮಾಡು" ಎಂದು ಅನನ್ಯ ಭಕ್ತಿಯಿಂದ ಆಳ್ವಾರರು ಪ್ರಾರ್ಥಿಸಿದ್ದಾರೆ.

ಹೀಗೆ, ದಕ್ಷಿಣಭಾರತದ ಚೋಳ,ಪಾಂಡ್ಯ, ಮಲೆಯಾಳ ದೇಶಗಳ ಪುಣ್ಯಕ್ಷೇತ್ರಗಳಲ್ಲಿ ಬಿಜಯಮಾಡಿರುವ ಪರಮಾತ್ಮನ ದಿವ್ಯಮಂಗಳ ವಿಗ್ರಹಗಳ ಅರ್ಚಾಮೂರ್ತಿಗಳನ್ನು ಆಳ್ವಾರರು ಮನೋಹರ ರೀತಿಯಲ್ಲಿ ವರ್ಣಿಸಿದ್ದಾರೆ. ಈ ಮೂರ್ತಿಗಳನ್ನು ದರ್ಶನಮಾಡಿದಾಗ ಆಳ್ವಾರರು, ಪರಮಾತ್ಮನನ್ನೇ ಸಾಕ್ಷಾತ್ತಾಗಿ ದರ್ಶನಮಾಡಿದಂತೆ ಭಾವಿಸುತ್ತಿದ್ದರು. ಭಕ್ತರ ಇಷ್ಟಾರ್ಥಗಳನ್ನು ಕರುಣಿಸುವ ಶಕ್ತಿ ಆ ಮೂರ್ತಿಗಳಿಗಿವೆ ಎಂದು ಅವರು ದೃಢವಾಗಿ ನಂಬಿದ್ದರು. ಭಗವಂತನ ವಿಶ್ವರೂಪವನ್ನೂ, ವಿರಾಡ್ರೂಪವನ್ನೂ, ಸಾಕ್ಷಾತ್ಕರಿಸಿಕೊಂಡ ಆಳ್ವಾರರು ತಮ್ಮ ಈ ಅನುಭವವನ್ನು ತಾವು ರಚಿಸಿ ಹಾಡಿರುವ ದಿವ್ಯಪ್ರಬಂಧಗಳಲ್ಲಿ ವಿವರಿಸಿದ್ದಾರೆ. ಅವುಗಳೆಲ್ಲ ಅನುಭವ ಸಾಹಿತ್ಯವಾಗಿರುವುದಲ್ಲದೆ, ಉಪದೇಶರೂಪಗಳಾಗಿವೆ. ಜಗತ್ತಿನ ಜನರು ತಮಗಾಗಿ ಪರಮಾತ್ಮನನ್ನು ಪ್ರಾರ್ಥಿಸಿ ಉಜ್ಜೀವಿಸಲಿ ಎಂದು ಅವರು ದಿವ್ಯಪ್ರಬಂಧಗಳಲ್ಲಿ ವಿವರಿಸಿದ್ದಾರೆ. ಇಂತಹ ಭಕ್ತಿ ಪ್ರಧಾನ ಸಾಹಿತ್ಯದ ಕಡೆಗೆ, ಜನರು ತಮ್ಮ ಗಮನ ಹರಿಸಬೇಕು. ಇದರಿಂದ ಜನರ ಯೋಗಕ್ಷೇಮಾಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.



(4 ನೇ ಪುಟದಿಂದ)

ತಿರುಮಲೆಯನ್ನು ಸೇರಿದ ರಾಜದಂಪತಿಗಳಿಗೆ ವಿಶ್ರಾಂತಿಯ ನಂತರ ವೈಕುಂಠ ತೋರಣದ ಬಳಿ ಮಧ್ಯಾಹ್ನ 12–20 ರ ವೇಳೆಯಲ್ಲಿ ಗಂಧ, ಸ್ವಾಮಿಪ್ರಸಾದ, ಹಾಗೂ ಶೇಷವಸ್ತ್ರಗಳೊಂದಿಗೆ ತಿ.ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಸ್ವಾಗತ ನೀಡಿದರು. ಮಂಗಳವಾದ್ಯಗಳೊಡನೆ ಆಲಯಕ್ಕೆ ಬಂದ ರಾಜ ದಂಪತಿಗಳು ಅಂದು ದೇವಾಲಯದಲ್ಲಿ ನಡೆದ 108 ಸ್ವರ್ಣಕಮಲ ಸೇವೆಯನ್ನು ಕಂಡು ಸ್ವಾಮಿಯನ್ನು ಆರಾಧಿಸಿದರು. ಸ್ವಾಮಿಯ ವಜ್ರಕಿರೀಟ, ಮತ್ತಿತರ ಆಭರಣಗಳನ್ನೂ ಅವರಿಗೆ ತೋರಿಸಿ, ಅವುಗಳ ಬಗ್ಗೆ ವಿವರಗಳನ್ನು ರಾಜದಂಪತಿಗಳಿಗೆ ಕಾರ್ಯನಿರ್ವಹಣಾಧಿಕಾರಿ ತಿಳಿಸಿದರು. ಮೊದಲ ಬಾರಿಗೆ ತಿರುಮಲೆಗೆ ಆಗಮಿಸಿದ ನೇಪಾಳದ ರಾಜರನ್ನು ಸ್ವಾಮಿ ಶೇಷವಸ್ತ್ರದಿಂದ ಗೌರವಿಸಲಾಯಿತು. ರಾಜದಂಪತಿಗಳು ಬಂಗಾರದ ನಾಣ್ಯಗಳಿದ್ದ ಕಿರಿಯ ವೆಲ್ವೆಟ್ ಪೆಟ್ಟಿಗೆಯನ್ನು ಸ್ವಾಮಿ ಹುಂಡಿಯಲ್ಲಿ ಸಮರ್ಪಿಸಿದರು. ವಸಂತ ಮಂಟಪದಲ್ಲಿ ರಾಜದಂಪತಿಗಳಿಗೆ ವೇದಪಂಡಿತರ ಆಶೀರ್ವಾದ ಸ್ವಾಮಿ ಪ್ರಸಾದ ವಿತರಣೆ ಆಯಿತು.

ತಿರುಮಲೆಯ ಆಲಯದ ವಾಸ್ತುಶಿಲ್ಪ, ಇತಿಹಾಸ ವಿವರಗಳನ್ನು ಕೇಳಿ ತಿಳಿದುಕೊಂಡ ರಾಜ ದಂಪತಿಗಳು ಅಲ್ಲಿನ ಪರಿಶುಭ್ರತೆ, ಸರತಿಯ ಸಾಲಿನ ವ್ಯವಸ್ಥೆಗಳನ್ನು ಮೆಚ್ಚಿಕೊಂಡರು. ನೇಪಾಳದ ಪಶುಪತಿನಾಥ ದೇವಾಲಯದಲ್ಲೂ ಇಂತಹದೇ ಶುಭ್ರತೆ, ವ್ಯವಸ್ಥೆಗಳನ್ನು ಉಂಟುಮಾಡಲು ತಿ.ತಿ.ದೇ. ಸಹಕರಿಸಬೇಕೆಂದು ಮಹಾರಾಜರು ತಿ.ತಿ.ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ, ಕಾರ್ಯನಿರ್ವಹಣಾಧಿಕಾರಿ ಶ್ರೀ ಲಕ್ಷ್ಮೀನಾರಾಯಣ ಇವರೊಂದಿಗೆ ಮಾತನಾಡುತ್ತ ಕೋರಿದರು. ಅಂತಹ ಎಲ್ಲ ವಿಧವಾದ ನೆರವನ್ನೂ ನೀಡಲು ತಿ. ತಿ. ದೇ. ಸಿದ್ಧವೆಂದು ತಿಳಿಸುತ್ತ ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯನವರು ನೇಪಾಳದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ನಿರ್ಮಾಣಕ್ಕೂ ತಿ. ತಿ. ದೇ. ನೆರವು ನೀಡಲು ಸಿದ್ಧವೆಂದು ತಿಳಿಸಿ, ವಿದೇಶಗಳಲ್ಲಿ ಶ್ರೀ ವೆಂಕಟೇಶ್ವರ ದೇವಾಲಯ ನಿರ್ಮಾಣದಲ್ಲಿ ತಿ. ತಿ. ದೇ. ಸಹಾಯ ಸಹಕಾರ ಯೋಜನೆಯನ್ನು ವಿವರಿಸಿದರು. ಮಹಾರಾಣಿ ಶ್ರೀಮತಿ ಐಶ್ವರ್ಯ ಅವರು ತಿರುಮಲೆಯ ಆಲಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಕೇಳಿ ತಿಳಿದುಕೊಂಡರು. ಕಾರ್ಯನಿರ್ವಹಣಾಧಿಕಾರಿಯವರು ರಾಜದಂಪತಿಗಳಿಗೆ ತಿ ತಿ.ದೇ ಗಳ ವಿವಿಧ ಯಾತ್ರಿಕೋಪಯೋಗಿ ಕಾರ್ಯಕ್ರಮಗಳು, ಮಾನವ ಸೇವಾ ಕಾರ್ಯಕ್ರಮಗಳು ಸಾಂಸ್ಕೃತಿಕ ಶೈಕ್ಷಣಿಕ ಕಾರ್ಯಕ್ರಮಗಳನ್ನು ವಿವರಿಸಿದರು.



ಕನಕದಾಸರ ಉತ್ಸವದಲ್ಲಿ ಮಾತನಾಡುತ್ತ ಶ್ರೀ ಕೆ. ಅಪ್ಪಣ್ಣಾಚಾರ್ಯ

## ಕಾಗಿನೆಲೆಯಲ್ಲಿ ಕನಕದಾಸರ ಜಯಂತಿ

ಧಾರವಾಡದ ಕಾಗಿನೆಲೆಯಲ್ಲಿ ಕಳೆದ ನವಂಬರ್ 2ʼ, 23 ರ ಶನಿವಾರ ಹಾಗೂ ಭಾನುವಾರಗಳಲ್ಲಿ ಕನಕದಾಸರ ಜಯಂತಿ ಉತ್ಸವವು ಬೆಂಗಳೂರಿನ ಶ್ರೀ ಗುರು ರಾಘವೇಂದ್ರಸ್ವಾಮಿ ಟ್ರಸ್ಟ್, ಶ್ರೀ ಕನಕ ಸಮಿತಿ ಟ್ರಸ್ಟ್, ಕಾಗಿನೆಲೆ, ದಾಸಸಾಹಿತ್ಯ ಪ್ರಾಜೆಕ್ಟ್, ತಿ. ತಿ. ದೇ. ಗಳ ಸಂಯುಕ್ತ ಆಶ್ರಯದಲ್ಲಿ ಯಶಸ್ವಿಯಾಗಿ ನಡೆಯಿತು.

ಕನಕದಾಸರ ಬಗ್ಗೆ ಶ್ರೀ ಎಂ ಎ. ಜಯರಾಮರಾಯರೂ, ಕಾಗಿನೆಲೆಯ ಬಗ್ಗೆ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ ಅವರೂ, ಭದ್ರಗಿರಿ ಅಚ್ಯುತದಾಸರೂ ಉಪನ್ಯಾಸಗಳನ್ನು ನೀಡಿದರು. ಶ್ರೀ ಅಪ್ಪಣ್ಣಾಚಾರ್ಯರೂ ಉಪನ್ಯಾಸಮಾಡಿದರು. ಶ್ರೀ ಚಿಂತಲಪಲ್ಲಿ ಕೃಷ್ಣಮೂರ್ತಿ, ಶ್ರೀಮತಿ ಪ್ರಸನ್ನಕುಮಾರಿ, ಶ್ರೀ ಪಿ. ಮಲ್ಲಿಕಾರ್ಜುನಯ್ಯ, ಶ್ರೀ ಎಸ್. ಕೆ. ರಾಮಚಂದ್ರನ್ ಅವರುಗಳಿಂದ ಸಂಗೀತ ಸಭೆಗಳೂ, ಶ್ರೀ ಕೆ. ಎಸ್. ನರಸಿಂಹಮೂರ್ತಿ ಹಾಗೂ ಶ್ರೀಮತಿ ರುಕ್ಮಿಣಮ್ಮನವರುಗಳ ಕಾವ್ಯವಾಚನವೂ, ಶ್ರೀ ಕನಕದಾಸರು, ಶ್ರೀಮತಿ ಬಿ. ಡಿ. ರಾಜಮ್ಮ, ಶ್ರೀ ವಿ. ಅಶ್ವತ್ಥನಾರಾಯಣದಾಸರುಗಳ ಹರಿಕಥೆಗಳೂ ಏರ್ಪಾಡಾಗಿದ್ದವು.



ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥರಿಂದ ಶ್ರೀ ಅರಳುಮಲ್ಲಿಗೆ ಅವರಿಗೆ ಸನ್ಮಾನ

# ಡಾ॥ ಎನ್. ಅನಂತರಂಗಾಚಾರ್ ನಿಧನ

ಕನ್ನಡದ ಖ್ಯಾತ ವಿದ್ವಾಂಸರೂ, ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರೂ ಆದ ಡಾ॥ ಎನ್. ಅನಂತರಂಗಾಚಾರ್ಯರು ಮೈಸೂರಿನಲ್ಲಿ ಕಳೆದ ಡಿಸೆಂಬರ್ 7 ರಂದು ನಿಧನರಾದರೆಂದು ತಿಳಿಸಲು ವಿಷಾದವಾಗುತ್ತದೆ.

ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಉದ್ದಾಮ ಪಂಡಿತರಾಗಿದ್ದ ಶ್ರೀ ಅನಂತ ರಂಗಾಚಾರ್ಯರು ಕೆಲಕಾಲದಿಂದ ಅಸ್ವಸ್ಥರಾಗಿದ್ದು, ಚಟುವಟಿಕೆಯಿಂದ ಇದ್ದರು. ಇದ್ದಕ್ಕಿದ್ದಂತೆ ಅಂತ್ಯ ಹೊಂದಿದರು. (ಸಪ್ತಗಿರಿಯ ಓದುಗರಿಗೆ ತಮ್ಮ ಲೇಖನಗಳಿಂದ ಇವರು ಪರಿಚಿತರು )

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಸ್ನಾತಕೋತ್ತರ ಪದವಿಯ ಮೊದಲ ಗುಂಪಿನ ನವರತ್ನಗಳಲ್ಲಿ ಒಬ್ಬರಾದ ಅನಂತರಂಗಾಚಾರ್ಯರು ಕುವೆಂಪು, ಕೆ. ವೆಂಕಟರಾಮಪ್ಪ, ಡಿ. ಕೆ. ಭೀಮಸೇನಾಚಾರ್, ಡಿ. ಎಲ್. ನರಸಿಂಹಾಚಾರ್, ಮೊದಲಾದವರೊಂದಿಗೆ ಬಿ. ಎಂ. ಶ್ರೀ, ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿಗಳ ಹಿರಿತನದಲ್ಲಿ ತರಬೇತಿ ಪಡೆದು ನಾಡು ನುಡಿಗಳ ಸೇವೆಗೆ ಅಂಕಿತರಾದರು.

ಮೈಸೂರಿನ ಪ್ರಾಚ್ಯ ಸಂಶೋಧನ ಸಂಸ್ಥೆಯಲ್ಲಿಯೂ ಕೆಲಸ ಮಾಡಿದ ಶ್ರೀಯುತರು ಹಲವಾರು ಹಳಗನ್ನಡ ಕಾವ್ಯಗಳನ್ನು ಬೆಳಕಿಗೆ ತಂದುಕೊಟ್ಟರು. ಅವರ ಸಂಪಾದಿತ ಕೃತಿಗಳಲ್ಲಿ ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವವೂ,ಕುಮಾರವ್ಯಾಸನ ಭಾರತದ ದ್ರೋಣ, ಕರ್ಣ, ಶಲ್ಯ ಗದಾಪರ್ವಗಳೂ, ಜಗನ್ನಾಥ ವಿಜಯ ಸಂಗ್ರಹವೂ, ಕುಮಾರ ರಾಮ ಸಾಂಗತ್ಯಸಂಗ್ರಹವೂ ಹೆಚ್ಚಿನ ಹೆಸರು ಪಡೆದಿವೆ. ಕಾವ್ಯಸಾರ – ಸಂಪಾದನೆಗಾಗಿ ಅಕ್ಯಾಡಮಿಯ ಬಹುಮಾನವನ್ನೂ ಪಡೆದಿದೆ.

ವೇದಾಂತ ದೇಶಿಕರ ಹಾಗೂ ಅವರ ಸಾಹಿತ್ಯದ ಬಗ್ಗೆ ಮೂರು ಪುಸ್ತಕಗಳು ನಮ್ಮಾಳ್ವಾರರ ತಿರುವಾಯ್‌ಮೊಳಿ ವ್ಯಾಖ್ಯಾನ ಮೊದಲಾದವು ಅವರ ವ್ಯಾಖ್ಯಾನ, ವಿವರ ಸಂಗ್ರಹ ಕೌಶಲಗಳಿಗೆ ಹಿಡಿದ ಕನ್ನಡಿಗಳು.

ಭಾರತೀಯ ಭಾಷೆಗಳ ಸಾಹಿತ್ಯ ಇತಿಹಾಸವನ್ನು (ಭಾರತೀಯ ಆಂಗ್ಲ ಭಾಷಾಸಾಹಿತ್ಯವನ್ನೂ ಸೇರಿದಂತೆ) ಒಟ್ಟಿಗೆ ನೀಡುವ ಒಂದು ಸಾವಿರ ಪುಟದ ಸಾಹಿತ್ಯಭಾರತಿಯ ಹಿರಿಯ ಸಂಪುಟವೂ, 'ಕನ್ನಡ ಚಂಪೂಕಾವ್ಯಗಳ ಪದ್ಯಾನು ಕ್ರಮಣಿ'ಯೂ ಕನ್ನಡದಲ್ಲಿಯೆ ಅಲ್ಲದೆ ಭಾರತೀಯ ಭಾಷೆಗಳಲ್ಲೇ ಪ್ರಥಮವೆನ್ನಬಹುದಾದ ಪ್ರಯತ್ನದ ಫಲಗಳು.

ತಿ. ತಿ. ದೇ. ಆರ್ಥಿಕ ನೆರವಿನಿಂದ ಶ್ರೀಯುತರು 'ರಾಮಾಯಣ ಭಾರತೀ' ಹಾಗ 'ತೀರ್ಥ ಕಲಾಕ್ಷೇತ್ರ ದರ್ಶನ' ಪುಸ್ತಕಗಳನ್ನೂ ಪ್ರಕಟಿಸಿದಾರೆ.

83 ವರ್ಷದ ಈ ಹಿರಿಯ ಚೇತನ ತಮ್ಮ ಇಳಿಗಾಲದಲ್ಲೂ ನಿರಂತರ ಸಾಹಿತ್ಯ ಸಂಶೋಧನೆಗಳಲ್ಲಿ ತೊಡಗಿದ್ದು ಕ್ರಿಯಾಶೀಲತೆಗೆ ಹೆಸರಾಗಿದ್ದರು ಉದ್ದಾಮ ವಾಗ್ಮಿಗಳೂ ಆದ ಅವರ ಅಧ್ಯಾಪನದಿಂದ ಉಪಕೃತರಾದ ಶಿಷ್ಯರು ಸಹಸ್ರಸಂಖ್ಯೆಯಲ್ಲಿ.

ಹೆಂಡತಿ ಹಾಗೂ ಮಕ್ಕಳನ್ನು ಅಗಲಿರುವ ಶ್ರೀಯುತರ ಆತ್ಮಕ್ಕೆ ಶಾಂತಿಯನ್ನು ದೇವರು ನೀಡಲೆಂದು ಸಪ್ತಗಿರಿ ಹಾರೈಸುತ್ತದೆ.

ಸಂ॥

ಅಪಾರ ಜನ ಸೇರಿದ ಉತ್ಸವಗಳು ಎರಡು ದಿನವೂ ನಯನ ಮನೋಹರವಾಗಿ, ಶ್ರವಣಾನಂದಕರವಾಗಿ ನಡೆದವೆಂದು ವರದಿಗಳಾಗಿವೆ.

## ಅಜ್ಞಾತ ಭಕ್ತನ ಕಾಣಿಕೆ

ತಿರುಮಲೆಯ ಸ್ವಾಮಿ ಹುಂಡಿಯಲ್ಲಿ ಅಜ್ಞಾ[illegible] ಭಕ್ತರೊಬ್ಬರು ನವಂಬರ್ 29 ರಂದು ಶನಿವಾ[illegible] ಎರಡು ಲಕ್ಷ ಇಪ್ಪತ್ತು ಸಾವಿರ ರೂಗಳನ್ನು ಸಮರ್ಪಿಸಿದರೆಂದು ವರದಿಯಾಗಿದೆ. ಸಾಮಾನ[illegible] ವಾಗಿ ಇಂತಹ ಕಾಣಿಕೆಗಳನ್ನು ವಾರ್ತಾಪತ್ರಿ[illegible] ಯಲ್ಲೊ ಚೀಲದಲ್ಲೋ ಇಟ್ಟು ಸಮರ್ಪಿಸು[illegible] ದುಂಟು. ಆದರೆ ಈ ಬಾರಿ ಹಾಗಾಗದೆ ಒಂದೆ ರೀತಿಯಲ್ಲಿ ಕಟ್ಟಿದ ಬೇರೆ ಬೇರೆ ಕಟ್ಟುಗಳು ಬಿ[illegible] ಬಿಡಿಯಾಗಿದ್ದವು. ಆದರೂ ಅವುಗಳ ಜೋಡಣೆ ಕಟ್ಟಿದ ರೀತಿಗಳ ಆಧಾರದಿಂದ ಇವುಗಳನ್ನು ಒಬ್ಬರೇ ಸಮರ್ಪಿಸಿರಬೇಕೆಂದು ಭಾವಿಸಲಾಗಿದೆ ಅಂದು ಬೆಳಗ್ಗೆ ಹುಂಡಿಯಿಂದ ಸ್ವಾಮಿಗೆ ಐದೂವ[illegible] ಲಕ್ಷ ರೂಗಳ ಆದಾಯ ಆಯಿತೆಂದು ವರ[illegible] ಯಾಗಿದ್ದು ಸಾಧಾರಣ ದಿನಗಳಲ್ಲಿ ಇಷ್ಟು ಹೆಚ್ಚಿ[illegible] ಮೊತ್ತ ಬರುವುದು ಅಪರೂಪವೆನ್ನಲಾಗಿದೆ.

## ಆಂಧ್ರ ಮಂತ್ರಿಗಳ ಸ್ವಾಮಿದರ್ಶನ

ಆಂಧ್ರಪ್ರದೇಶದ ಗೃಹಶಾಖೆಯ ಸಚಿವ ಶ್ರೀ ವಸಂತ ನಾಗೇಶ್ವರರಾವ್, ದೇವಾದಾಯಶಾಖ[illegible] ಮಂತ್ರಿ ಶ್ರೀ ಯತಿರಾಜಾರಾವ್ ಅವರ[illegible] ನಂಬರ್ 28 ರ ಶುಕ್ರವಾದ ತಿರುಮಲೆಗೆ ಆಗಮಿ[illegible] ಸ್ವಾಮಿ ಸಂದರ್ಶನ ಪಡೆದು ಆರಾಧಿಸಿದರು. [illegible] ಈರ್ವರು ಮಂತ್ರಿಗಳೂ ಇಪ್ಪತ್ತೈದು ರೂಗ[illegible] ವಿಶೇಷ ಪ್ರವೇಶದ ಟಿಕೆಟ್ ಕೊಂಡು ದೇವಾಲಯ ವನ್ನು ಪ್ರವೇಶಿಸಿದರು. ತಿರುಮಲೆಯ ಡೆಪ್ಯೂ[illegible] ಕಾರ್ಯನಿರ್ವಹಣಾಧಿಕಾರಿ ಶ್ರೀ ಮುನಿಕೃಷ್ಣನ್ ಹಾಗೂ ಶ್ರೀ ವೆಂಕಟಮುನಿ ನಾಯುಡು ಅವರ[illegible] ಗಳು ಮಂತ್ರಿಗಳನ್ನು ಸ್ವಾಗತಿಸಿದರು

## ಕ್ಯಾನ್ಸರ್ ನಿವಾರಣಾ ಘಟಕಕ್ಕೆ ತಿ. ತಿ. ದೇ. ನೆರವು

ತಿರುಪತಿಯ ಶ್ರೀ ವೆಂಕಟೇಶ್ವರ ರಾಮ[illegible] ನಾರಾಯಣ ರೂಯಾ ಆಸ್ಪತ್ರೆಯಲ್ಲಿ ಕ್ಯಾನ್ಸ[illegible] ನಿವಾರಣಾ ಘಟಕಕ್ಕೆ 20 ಹಾಸಿಗೆಗಳ ವಾರ್ಡ್[illegible] ನಿರ್ಮಾಣಕ್ಕಾಗಿ ತಿ. ತಿ. ದೇ. ಗಳು ರೂ. 7.9[illegible] ಲಕ್ಷರೂಗಳ ನೆರವು ನೀಡಲು ತೀರ್ಮಾನಿಸಿದೆ.

ಹೈದರಾಬಾದಿನಲ್ಲಿ ನವಂಬರ್‌ನಲ್ಲಿ ನಡೆ[illegible] ಆಡಳಿತ ನಿರ್ವಾಹಕ ಮಂಡಳಿಯ ಸಭೆಯಲ್ಲಿ [illegible] ತೀರ್ಮಾನವಾಗಿ, ರಾಜಮಹೇಂದ್ರಿಯ ವೇ[illegible] ಶಾಸ್ತ್ರ ಪರಿಷತ್‌ನ ಸುವರ್ಣ ಮಹೋತ್ಸ[illegible] ಗಳಿಗಾಗಿ ಹತ್ತು ಸಾವಿರ ರೂ.ಗಳನ್ನು ನೀಡಲು ತೀರ್ಮಾನಿಸಲಾಯಿತು.

# ಕೈವಾರದಲ್ಲಿ ಯಶಸ್ವಿಯಾದ ಹಿಂದೂ ಭ್ರಾತೃತ್ವ ಸಮ್ಮೇಳನ

ಕೋಲಾರ ಜಿಲ್ಲೆಯ ಶ್ರೀ ಯೋಗಿ ನಾರಾಯಣರ ಶ್ರೀಕ್ಷೇತ್ರ ಕೈವಾರದಲ್ಲಿ ಇದೇ ಡಿಸೆಂಬರ್ 13, 14 ರಂದು ಹಿಂದೂ ಭ್ರಾತೃತ್ವ ಸಮ್ಮೇಳನ ಅಸಂಖ್ಯ ಹಿಂದೂ ಬಂಧುಗಳ ಹೈಂದವ ಸಮಾಜ ಮಾರ್ಗದರ್ಶಿ ಮಠಾಧಿಪತಿಗಳ, ಹಿಂದೂ ಸೇವಾದೀಕ್ಷಿತರ ಭಾಗವಹಿಸುವಿಕೆಯಿಂದ ಯಶಸ್ವಿಯಾಗಿ ನಡೆಯಿತು.

ದಿನಾಂಕ 13 ರಂದು ಸಂಜೆ ಐದುಗಂಟೆಗೆ ಸಮ್ಮೇಳನ ಸ್ಥಳಕ್ಕೆ (ಯೋಗಿ ನಾರಾಯಣ ಮಂಟಪ) ಗಣ್ಯರನ್ನು, ಯತಿಗಳನ್ನು ಆಕರ್ಷಕವಾದ ಶೋಭಾಯಾತ್ರೆಯಲ್ಲಿ ಎಂ. ಎಸ್. ಆರ್. ಕಾಲೇಜಿನ ವಿದ್ಯಾರ್ಥಿನಿಲಯದಿಂದ ಕರೆತರಲಾಯಿತು. ಜ್ಯೋತಿ ಬೆಳಗಿಸುವುದರ ಮೂಲಕ ಸಮ್ಮೇಳನವನ್ನು ಉದ್ಘಾಟಿಸಿದ ಸಿದ್ಧಗಂಗಾ ಮಠಾಧೀಶರಾದ ಡಾ॥ ಶಿವಕುಮಾರಸ್ವಾಮಿಗಳು 'ಮೂರನೇ ಮಹಾಯುದ್ಧದತ್ತ ಸಾಗುತ್ತಿರುವ ಜಗತ್ತಿಗೆ ಶಾಂತಿಪಾಠವನ್ನು ಭಾರತ ಹೇಳಿಕೊಡಬೇಕಾದ ಅಗತ್ಯ ಆಸನ್ನವಾಗಿದೆಯೆಂದೂ ಅದಕ್ಕಾಗಿ ಧರ್ಮದ ಸ್ಥೂಲ ಪರಿಚಯ ಮಾಡಿಕೊಳ್ಳಬೇಕೆಂದೂ, ಹೇಳುತ್ತ, ಭಾರತೀಯತೆಯಲ್ಲಿನ ವೈವಿಧ್ಯದ ಒಳಸೂತ್ರವಾದ ಏಕತೆಯನ್ನು ಗುರುತಿಸಿ ನಡೆದಾಗಲೇ ರಾಷ್ಟ್ರ, ಸಮಾಜ, ವ್ಯಕ್ತಿಯ ಉದ್ಧಾರ ಸಾಧ್ಯ—ಎಂದೂ ತಿಳಿಸಿದರು.

ಸಂತ ಹರಿಹರಾನಂದ ಸರಸ್ವತಿಗಳು ಸಮ್ಮೇಳನಕ್ಕೆ ಆಗಮಿಸಿದ್ದ ಯತಿವರೇಣ್ಯರ ಪರಿಚಯವನ್ನು ಮಾಡಿಕೊಟ್ಟರು. ಮಾಲೂರಿನ ಯೋಗಿ ರಾಮಕೃಷ್ಣಾಶ್ರಮದ ಶ್ರೀ ಶ್ರೀಕಂಠಾನಂದ ಸ್ವಾಮಿಜೀ ಅವರು ಮಾತ–ನಾಡುತ್ತ ಹಿಂದೂ ಸಮಾಜದಲ್ಲಿ ಭ್ರಾತೃತ್ವ ಬೆಳೆದು ವಿವೇಕಾನಂದರ ಆದರ್ಶಗಳನ್ನು ಪಾಲಿಸುವಂತಾಗಲಿ ಎಂದು ಹಾರೈಸಿದರು.

ವಿಶ್ವ ಹಿಂದೂ ಪರಿಷತ್ತಿನ ಪ್ರಾಂತ್ಯ ಕಾರ್ಯದರ್ಶಿ ಶ್ರೀ ಎ. ಬಿ. ಅಳವಣಿ ಅವರು ವಿಶ್ವಹಿಂದೂ ಪರಿಷತ್‌ನ ಧ್ಯೇಯೋದ್ದೇಶಗಳನ್ನು ಕುರಿತು ವಿವರಿಸಿದರು. ಕೃಷ್ಣಶಾಸ್ತ್ರಿಯವರಿಂದ ವೇದಘೋಷ, ಶ್ರೀಮತಿಯರಾದ ಸರೋಜಾ ಕೃಷ್ಣಮೂರ್ತಿ, ವನಿತಾಮಣಿಯವರಿಂದ ಧ್ಯೇಯಗೀತೆಯ ನಂತರ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರೂ, ಯೋಗಿ ನಾರಾಯಣ ಟ್ರಸ್ಟ್‌ನ ಅಧ್ಯಕ್ಷರೂ ಆದ ಶ್ರೀ ಎಂ. ಎಸ್. ರಾಮಯ್ಯನವರು ಏಕಾತ್ಮತಾ ಭಾವ, ಸಂಘಟನೆ, ಜಾಗೃತಿಗಳನ್ನುಂಟುಮಾಡುವುದೇ ಸಮ್ಮೇಳನದ ಧ್ಯೇಯವೆಂದು ಹೇಳುತ್ತ ಸ್ವಾಗತಿಸಿದರು.



ಭ್ರಾತೃತ್ವ ಸಮ್ಮೇಳನದಲ್ಲಿ ಮಾತನಾಡುತ್ತ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಚಿತ್ರ – ಶ್ರೀಗುರು

ಶಿರಸಿಯ ಅಂಬಿಕಾನಂದ ಮಹಂತಸ್ವಾಮಿಗಳು ಸಮ್ಮೇಳನದ ಧರ್ಮಧ್ವಜವನ್ನು ಏರಿಸಿದರು. ಸಮ್ಮೇಳನದ ಅಂಗವಾಗಿ ಏರ್ಪಡಿಸಿದ ಸಾಂಸ್ಕೃತಿಕ ಬೃಹತ್ ಭಾರತ ಪ್ರದರ್ಶಿನಿಯನ್ನು ಉಡುಪಿಯ ಶ್ರೀ ಶ್ರೀ ಬನ್ನಂಜೆ ರಾಘವೇಂದ್ರ ತೀರ್ಥರು ಉದ್ಘಾಟಿಸಿದರು.

ಭಾನುವಾರ ಬೆಳಗ್ಗೆ ಬೇಲಿಮಠದ ಶ್ರೀ ಶ್ರೀ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ನಡೆದ ಪ್ರಥಮ ಸಮಾವೇಶದಲ್ಲಿ ಪರಿಷತ್ತಿನ ದಕ್ಷಿಣಾಂಚಲ ಕಾರ್ಯದರ್ಶಿ ಶ್ರೀ ಸದಾನಂದ ಕಾಕಡೆಯವರು ಮಾತನಾಡುತ್ತ ದೇವಾಲಯಗಳ ರಕ್ಷಣೆಗೆ, ಸನಾತನ ಧರ್ಮ ಸಂರಕ್ಷಣೆಗೆ, ಧಾರ್ಮಿಕ ಮೌಲ್ಯಗಳ ಪುನರುತ್ಥಾನಕ್ಕೆ ಇಂಥ ಸಮ್ಮೇಳನಗಳು ಅಗತ್ಯವೆಂದು ನುಡಿದರು. ಶ್ರವಣಬೆಳಗೊಳದ ಚಾರುಕೀರ್ತಿ ಭಟ್ಟಾರಕ ಸ್ವಾಮಿಜೀ, ಶ್ರೀ ಶ್ರೀ ಅಂಬಿಕಾನಂದ ಮಹಂತರು, ಶ್ರೀಮತಿ ನಾಗಮಣಿ ಶಾಸ್ತ್ರಿ ಅವರುಗಳು ಮುಖ್ಯ ಅತಿಥಿಗಳಾಗಿ ಆಗಮಿಸಿದರು.

ವಿಕ್ರಮ ಪತ್ರಿಕೆಯ ಸಂಪಾದಕ ಶ್ರೀ ಬೆ. ಸು. ನ. ಮಲ್ಯರು ಸನಾತನ ಧರ್ಮದ ಮೌಲ್ಯಗಳ, ಜೀವನವಿಧಾನಗಳ ವೈಜ್ಞಾನಿಕತೆಯನ್ನು ವಿವರಿಸಿದರು.



ಶೋಭಾಯಾತ್ರೆಯ ಒಂದು ಪಾರ್ಶ್ವನೋಟ.

**ಮುಂದಿನ ಸಂಚಿಕೆಯಲ್ಲಿ .... .... ....**

**ಸಪ್ತಗಿರಿ. — ಫೆಬ್ರುವರಿ 1987**

**ಶಕ್ತಿದೇವತೆಯ ವಿವಿಧಮುಖಗಳು**
– ಡಾ॥ ಎಸ್.ವಿ. ವಿಮಲ

**ದ್ವೈತಸ್ಥಾಪಕ ಶ್ರೀ ಮಧ್ವಾಚಾರ್ಯ**
– ಡಾ॥ ಯು. ರಾಮಭಟ್ಟ

**ಕರ್ನಾಟಕ ಸಂಗೀತದ ತ್ರಿಮೂರ್ತಿಗಳು.**
– ಡಾ॥ ಎನ್. ಅನಂತರಂಗಾಚಾರ್ಯ

**ಅದು ತಾರಕ ಇದು ಮಾರಕ**
– ವಿದ್ವಾನ್ ಬ.ನ. ಗುಂಡೂರಾವ್

**ತಲವಕಾರೋಪನಿಷತ್ತಿನಲ್ಲಿ ಪೂರ್ಣಪ್ರಜ್ಞ ದರ್ಶನ**
– ಕೆ. ಬಿ. ಅರ್ಚಕ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು

ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಫೆಬ್ರುವರಿ 1987

| | | |
|---|---|---|
| 2. | ಸೋಮವಾರ | ಶ್ರೀ ಪ್ರಣೀತಾನದೀ ಪುಷ್ಕರ ಪ್ರಾರಂಭ |
| 5. | ಗುರುವಾರ | ರಥಸಪ್ತಮಿ |
| 7. | ಶನಿವಾರ | ಶ್ರೀ ಮಧ್ವನವಮಿ |
| 9. | ಸೋಮವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ |
| 13. | ಶುಕ್ರವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ ಕುಮಾರಧಾರಾ ತೀರ್ಥ ಮುಕ್ಕೋಟಿ |
| 14. | ಶನಿವಾರ | ಶ್ರೀ ಗೋವಿಂದರಾಜಸ್ವಾಮಿ ಸನ್ನಿಧಿಯಲ್ಲಿ ಪ್ರಣಯ ಕಲಹೋತ್ಸವ |
| 18. | ಬುಧವಾರ | ಶ್ರೀನಿವಾಸಮಂಗಾಪುರಂ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ |
| 22. | ಭಾನುವಾರ | ಗರುಡವಾಹನ |
| 25. | ಬುಧವಾರ | ರಥೋತ್ಸವ |
| 26. | ಗುರುವಾರ | ಮಹಾಶಿವರಾತ್ರಿ, ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ನಂದಿವಾಹನೋತ್ಸವ<br>ಶ್ರೀನಿವಾಸಮಂಗಾಪುರಂ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅವಭೃತ |
| 27. | ಶುಕ್ರವಾರ | ತಿರುಕಚ್ಚಿನಂಬಿ ಉತ್ಸವಾರಂಭ. |

ನಂತರ ಸ್ತ್ರೀ ಮಹಿಳೆಯರ, ಶಿಕ್ಷಕರ, ಯುವಕರ ಕಾರ್ಮಿಕ ಕೃಷಿಕರ ಪ್ರತ್ಯೇಕ ವಿಚಾರ ಗೋಷ್ಠಿ ಗಳು ವಿವಿಧ ಪೀಠಾಧಿಪತಿಗಳ ಅಧ್ಯಕ್ಷತೆಯ ನಡೆದವು.

ಅಂದು ಮಧ್ಯಾಹ್ನ ನಡೆದ ಸಭೆಯಲ್ಲಿ ಮಾ ನಾಡುತ್ತ ಉಡುಪಿಯ ಅದಮಾರು ಮಠದ ಶ್ರೀ ಶ್ರೀ ವಿಭುದೇಶ ತೀರ್ಥರು ಅಸ್ಪೃಶ್ಯತಾ ನಿವಾರಣೆಗೆ ಕರೆನೀಡುತ್ತ ಎಲ್ಲರಲ್ಲೂ ಒಬ್ಬನೆ ದೇವರಿರುವಾಗ ಅಸ್ಪೃಶ್ಯತೆ ಎಲ್ಲಿಂದ ಬಂತ ಎಂದು ಪ್ರಶ್ನಿಸಿದರು. ಆದಿಚುಂಚನ ಗಿರಿಯ ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮಿಜೀ ಅವರ ಭ್ರಾತೃತ್ವ ಸಮ್ಮೇಳನದ ನಿರ್ಣಯಗಳ ಬಗ್ ಮಾತನಾಡಿದರು. ಪರಿಷತ್ತಿನ ಪ್ರಾಂತೀಯ ಸಂಘಟನಾಕಾರ್ಯದರ್ಶಿ ಶ್ರೀ ಬಾಬುರಾವ ದೇಸಾಯಿಯವರು ಮಾತನಾಡಿದರು.

ಸಮಾರೋಪ ಸಮಾರಂಭ ರಾಜಾಪುರ ಶ್ರೀ ಶ್ರೀ ರೇಣುಕಾ ಶಿವಾಚಾರ್ಯಸ್ವಾಮಿಗಳ ವಹಿಸಿದ್ದು ಪೇಜಾವರ ಮಠದ ಶ್ರೀ ಶ್ರೀ ವಿಶ್ವೇ ತೀರ್ಥರು ಸಮಾರೋಪ ಭಾಷಣ ಮಾಡುತ "ಅಭಿಮಾನ ಶೂನ್ಯತೆ ಬೇಡ, ದುರಭಿಮಾನ ಸಲ್ಲ ಸ್ವಾಭಿಮಾನ ಅಗತ್ಯ" ಎಂದು ಸೂತ್ರಪ್ರಾಯ ವಾದ ಕರೆ ನೀಡಿದರು.

ರಾಷ್ಟ್ರದ ರೈತನ ಬೆನ್ನೆಲುಬೂ ಸನಾತ ಧರ್ಮ ಸಂಸ್ಕೃತಿಯ ಸಂಕೇತವೂ ಆದ ಗೋರಕ್ಷ ಗಾಗಿ, ದೇವಾಲಯಗಳ ರಕ್ಷಣೆ, ಜೀರ್ಣೋ- ದ್ಧಾರಣಕ್ಕಾಗಿ, ಧಾರ್ಮಿಕ ಸ್ಥಳಗಳ ದುರಾಕ್ರಮಣ ನಿಷೇಧಕ್ಕಾಗಿ, ಅಕಾರಣ ಹಿಂಸೆಯ ನಿವಾರಣೆಗಾಗಿ ಅಸ್ಪೃಶ್ಯತಾ ನಿವಾರಣೆಗಾಗಿ, ಭ್ರಾತೃತ್ವ ಸಮ್ಮೇಳನದಲ್ಲಿ ನಿರ್ಣಯಗಳನ್ನು ಕೈಗೊಳ್ಳ ಲಾಯಿತು.

ಭ್ರಾತೃತ್ವ ಸಮ್ಮೇಳನದಲ್ಲಿ ಧಾರ್ಮಿ ವೈಚಾರಿಕ ಸಾಹಿತ್ಯದ ಪ್ರದರ್ಶನ ಹಾಗ ಮಾರಾಟವನ್ನು ಏರ್ಪಡಿಸಲಾಗಿದ್ದು, ಅಸಂಖ್ ಸದಸ್ಯರು ವಿವಿಧ ಧರ್ಮ ಗ್ರಂಥಗಳನ್ನು ಕೊಂಡ ಕೊಂಡರು.

## ದೇವನೂರಿನಲ್ಲಿನ ಲಕ್ಷ್ಮೀಶ ಭವನ

ಕನ್ನಡದಲ್ಲಿ ಜೈಮಿನಿ ಭಾರತವನ್ನು ರಚಿ ಖ್ಯಾತನಾದ ಕವಿ ಲಕ್ಷ್ಮೀಶನ ನೆನಪಿಗಾ ನಿರ್ಮಿಸಲಾದ ಲಕ್ಷ್ಮೀಶಭವನವನ್ನು ದೇವನೂ ನಲ್ಲಿ ಜಿಲ್ಲಾಧಿಕಾರಿ ಬಿ. ಪಾರ್ಥಸಾರಥಿ ಅವರ ಈಚೆಗೆ ಉದ್ಘಾಟಿಸಿದರು.

ಸುಮಾರು ನಾಲ್ಕುನೂರು ವರ್ಷಗಳ ಹಿಂ ಕವಿ ವಾಸವಾಗಿದ್ದನೆಂದು ಹೇಳಲಾದ ಮನೆಯ ಪ್ರಾರ್ಥನಾಮಂದಿರ ಹಾಗೂ ಗ್ರಂಥಾಲಯಗಳ ಸ್ಥಳಾವಕಾಶವಿರುವ ಚಿಕ್ಕದಾದ ಹೊಸಕಟ್ಟ ಎದ್ದುನಿಂತಿದೆ.

ಕೃಪೆ – ಕನ್ನಡಪ್ರಭ

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

Regd. No. H / TRP/14

ವಾರ್ಷಿಕ ಚಂದಾ ರೂ




ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ

ಓದುಗರಿಗೆ, ಏಜಂಟರಿಗೆ, ಜಾಹೀರಾತುದಾರ

ಸಪ್ತಗಿರಿ ಯ

ಸಂಕ್ರಾಂತಿಯ ಶುಭಾಶಯಗಳು